5. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಳಿಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ಅಂತಹ ಕಡಿಮೆ ಅವಧಿಗೆ ಅನುಗುಣವಾಗಿ ವೇತನವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.

6. ದಿನಗೂಲಿ ನೌಕರರಿಗೆ ಅವರ ದಿನದ ವೇತನ ದರಗಳನ್ನು ಕಂಡು ಹಿಡಿಯಬೇಕಾದಲ್ಲಿ ತಿಂಗಳ ವೇತನ ದರವನ್ನು 26 ರಿಂದ ಭಾಗಿಸಬೇಕು. ಭಾಗಿಸಿದಾಗ ಬಂದ ದರವು ಭಿನ್ನಾಂಕವಾಗಿದ್ದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸಬೇಕು.

7. ಸಂಸ್ಥೆಯಲ್ಲಿ ನಿಗದಿಪಡಿಸಿರುವ ವಾರದ ರಜೆ ಅಥವಾ ಹಬ್ಬದ ರಜಾ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನ ಕಾಯ್ದೆ ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡುಪಟ್ಟು ವೇತನವನ್ನು ಪಾವತಿ ಮಾಡತಕ್ಕದ್ದು.

8. ಕೆಲಸಗಾರರು ದಿನದ ನಿಗಧಿತ ಅವಧಿಗಿಂತ ಹೆಚ್ಚು ಸಮಯ ಕೆಲಸ ನಿರ್ವಹಿಸಿದಲ್ಲಿ ಅಂತಹ ಹೆಚ್ಚುವರಿ ಅವಧಿ ಕೆಲಸಕ್ಕೆ ಆತನ ವೇತನದ ಎರಡುಪಟ್ಟು ವೇತನವನ್ನು ಪಾವತಿಸತಕ್ಕದ್ದು.

9. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.

10. ಟ್ರೈನಿಗಳಿಗೆ ಆ ವರ್ಗದ ನೌಕರರು ಪಡೆಯುತ್ತಿರುವ ವೇತನದ ಪ್ರತಿಶತ 75 ರಷ್ಟು ವೇತನವನ್ನು ಶಿಷ್ಯ ವೇತನವನ್ನಾಗಿ ಪಾವತಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಬುಧವಾರ, ಸೆಪ್ಟೆಂಬರ್ ೧೪, ೨೦೧೧ (ಭಾದ್ರಪದ ೨೩, ಶಕ ವರ್ಷ ೧೯೩೩) | ನಂ. ೮೨೦ |
|---|---|---|

## ಕಾರ್ಮಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಾಇ 72 ಎಲ್‌ಎಂಡಬ್ಲ್ಯೂ 2010, ಬೆಂಗಳೂರು, ದಿನಾಂಕ: 14-09-2011**

ಕರ್ನಾಟಕ ರಾಜ್ಯಾದ್ಯಂತ **"ರಬ್ಬರ್ ಪ್ರಾಡಕ್ಟ್ಸ್ (ಫೋಮ್ ಮತ್ತು ಕಾಯರ್ ರಬ್ಬರೈಸ್ಡ್ ಪ್ರಾಡಕ್ಟ್ಸ್ ಸೇರಿದಂತೆ)"** ಉದ್ದಿಮೆಯಲ್ಲಿನ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕರಿಗೆ ಕನಿಷ್ಠ ವೇತನವನ್ನು ಪರಿಷ್ಕರಿಸಲು ಸರ್ಕಾರದ ಕರಡು ಪ್ರಸ್ತಾವನೆಯನ್ನು ದಿನಾಂಕ: 10-03-2011ರ ಕರ್ನಾಟಕ ರಾಜ್ಯ ಪತ್ರದ ಭಾಗ-4[ಎ]ರಲ್ಲಿ ಪ್ರಕಟಿಸಿ, ಕನಿಷ್ಠ ವೇತನ ಕಾಯ್ದೆ 1948 [ಕೇಂದ್ರಾಧಿನಿಯಮ ಸಂಖ್ಯೆ: 11] ರ ಸೆಕ್ಷನ್ 5(1)(ಬಿ) ಪ್ರಕಾರ ಇದರಿಂದ ಬಾಧಿತರಾಗುವ/ ಸಂಬಂಧವಿರುವ ವ್ಯಕ್ತಿಗಳ ಗಮನಕ್ಕೆ ತರಲಾಗಿದ್ದು, ಅವರಿಂದ ಸಲಹೆ/ಆಕ್ಷೇಪಣೆಗಳನ್ನು ಸ್ವೀಕರಿಸಲು 2 ತಿಂಗಳ ಕಾಲಾವಧಿಯನ್ನು ನೀಡಲಾಗಿತ್ತು. ಈ ಅವಧಿಯಲ್ಲಿ ಯಾವುದೇ ಸಲಹೆ/ಆಕ್ಷೇಪಣೆಗಳು ಸರ್ಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ. ಕರಡು ಪ್ರಸ್ತಾವನೆಯನ್ನು ರಾಜ್ಯ ಕನಿಷ್ಠ ವೇತನ ಸಲಹಾ ಮಂಡಳಿಯ ಮುಂದೆ ಮಂಡಿಸಲಾಗಿತ್ತು. ಸರ್ಕಾರದ ಪ್ರಸ್ತಾವನೆಯನ್ನು ಸುಧೀರ್ಘವಾಗಿ ಸಮಾಲೋಚಿಸಿ ಅಂತಿಮ ಅಧಿಸೂಚನೆಯನ್ನು ಹೊರಡಿಸಲು ಮಂಡಳಿಯು ಸರ್ಕಾರಕ್ಕೆ ತನ್ನ ಶಿಫಾರಸ್ಸನ್ನು ನೀಡಿರುತ್ತದೆ.

ಕರ್ನಾಟಕ ರಾಜ್ಯ ಕನಿಷ್ಠ ವೇತನ ಸಲಹಾ ಮಂಡಳಿಯ ಶಿಫಾರಸ್ಸನ್ನು ಪರಿಗಣನೆಗೆ ತೆಗೆದುಕೊಂಡು, ಕನಿಷ್ಠ ವೇತನ ಕಾಯ್ದೆ 1948 [ಕೇಂದ್ರಾಧಿನಿಯಮ ಸಂಖ್ಯೆ: 11] ರ ಸೆಕ್ಷನ್ 3(1)(ಬಿ) ಹಾಗೂ 5(1)(ಬಿ) ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮತ್ತು ಈ ಹಿಂದಿನ ಎಲ್ಲಾ ಅಧಿಸೂಚನೆಗಳನ್ನು ರದ್ದುಪಡಿಸಿ, ಕರ್ನಾಟಕ ರಾಜ್ಯಾದ್ಯಂತ ಯಾವುದೇ **"ರಬ್ಬರ್ ಪ್ರಾಡಕ್ಟ್ಸ್ (ಫೋಮ್ ಮತ್ತು ಕಾಯರ್ ರಬ್ಬರೈಸ್ಡ್ ಪ್ರಾಡಕ್ಟ್ಸ್ ಸೇರಿದಂತೆ)"** ಉದ್ದಿಮೆಯ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕ ವರ್ಗದವರಿಗೆ ದಿನಾಂಕ: 1-4-2011 ರಿಂದ ಜಾರಿಗೆ ಬರುವಂತೆ ಕನಿಷ್ಠ ವೇತನವನ್ನು ಈ ಅಧಿಸೂಚನೆಯ ಅನುಸೂಚಿಯಲ್ಲಿ ಇರುವಂತೆ ಪರಿಷ್ಕರಿಸಲಾಗಿದೆ.

**ಅನುಸೂಚಿ**

| ಕ್ರ ಸಂ | ಕೆಲಸದ ವರ್ಗಗಳು | ತಿಂಗಳಿಗೆ ಕನಿಷ್ಠ ವೇತನ ದರಗಳು [ರೂಪಾಯಿಗಳಲ್ಲಿ] | |
|---|---|---|---|
| | | ವಲಯ–1 | ವಲಯ–1 |
| 1 | 2 | 3 | 4 |
| **1. ಅತಿ ಕುಶಲ ಕಾರ್ಮಿಕರು** | | | |
| 1 | ಮ್ಯಾನೇಜರ್ | 4573–22 | 4444–07 |
| 2 | ಇಂಜಿನಿಯರ್ | | |
| 3 | ಫೋರ್‌ಮನ್ | 4515–47 | 4366–37 |
| 4 | ಸೂಪರ್‌ವೈಸರ್ | | |
| 5 | ಟೈರ್ ಇನ್ಸ್‌ಪೆಕ್ಟರ್ | | |
| **2. ಕುಶಲ ಕಾರ್ಮಿಕರು** | | | |
| 1 | ಕೆಮಿಷ್ಟ್ | 4408–37 | 4335–92 |
| 2 | ಆಪರೇಟರ್ | | |
| 3 | ವೈರ್‌ಮನ್ | | |
| 4 | ಎಲೆಕ್ಟ್ರೀಷಿಯನ್ | | |
| 5 | ಮೆಕ್ಯಾನಿಕ್–ಕಮ್ ಆಪರೇಟರ್ | | |
| 6 | ಬಾಯ್ಲರ್ ಅಟೆಂಡೆಂಟ್ | | |
| 7 | ಟೆಕ್ನಿಷಿಯನ್ | | |
| 8 | ಟರ್ನರ್ | | |
| 9 | ವೆಲ್ಡರ್ | | |
| 10 | ಮಿಕ್ಸಿಂಗ್ ಮಿಲ್ ವರ್ಕರ್ಸ್ | | |
| 11 | ಎಕ್ಸ್‌ಟ್ರೂಷನ್ ವರ್ಕರ್ಸ್ | | |
| 12 | ಫಿಟ್ಟರ್ | | |
| 13 | ರೋಲರ್‌ಮನ್ | | |
| 14 | ಮೆಕ್ಯಾನಿಕ್ | | |
| 15 | ಬಾಯ್ಲರ್‌ಸ್ಮಿತ್ | | |
| 16 | ಮೆಷಿನ್ ಆಪರೇಟರ್ಸ್, ಮೆಷಿನ್ ಆಪರೇಟರ್ಸ್ ಫೋಮ್ ವಿಭಾಗ ಸೇರಿದಂತೆ | | |
| 17 | ಬ್ಲಾಕ್ ಸ್ಮಿತ್ | | |
| 18 | ಕಾರ್ಪೆಂಟರ್ಸ್ | | |
| 19 | ಮೆಷನಿಸ್ಟ್ | | |
| 20 | ವಲ್ಕನೈಸರ್ಸ್, ಮೌಲ್ಡರ್ಸ್, ಎಕ್ಸಾಮಿನರ್ಸ್, ಬಫರ್ಸ್ ಮತ್ತು ಸಲ್ಯೂಷನರ್ಸ್ ಹಾಗೂ ಟೈರ್ ರಿಟ್ರೇಡಿಂಗ್ ವಿಭಾಗ | | |
| 21 | ಸೈಕಲ್ ರಿಕ್ಷಾ ಟೈರ್ ಫಾರ್ಮಿಂಗ್ ಕೆಲಸಗಾರರು ಇತರೆ ಕುಶಲ ಕೆಲಸಕ್ಕೆ | | |
| **3. ಅರೆ ಕುಶಲ ಕಾರ್ಮಿಕರು** | | | |
| 1 | ಸಹಾಯಕ ಮೆಕಾನಿಕ್ | 4242–47 | 4176–32 |
| 2 | ಸಹಾಯಕ ಆಪರೇಟರ್ | | |
| 3 | ಕಂಡಕ್ಟರ್ | | |
| 4 | ಫಾರೆಸ್ಟರ್ | | |
| 5 | ಸ್ಟೋರ್ ಕೀಪರ್ | | |
| 6 | ತಾಂತ್ರಿಕ ಸಹಾಯಕರು | | |

| 1 | 2 | 3 | 4 |
|---|---|---|---|
| 7 | ರಬ್ಬರ್ ಚಪ್ಪಲಿ ತಯಾರಕರು | | |
| 8 | ವರ್ಕ್‌ಶಾಪ್ ಅಟೆಂಡರ್ಸ್ | | |
| 9 | ವಲ್ಕನೈಸರ್ಸ್ ಹಾಗೂ ವಲ್ಕನೈಸಿಂಗ್ ಪ್ರೆಸ್‌ಗಳಲ್ಲಿನ ಕೆಲಸಗಾರರು | | |
| 10 | ಮೌಲ್ಡಿಂಗ್ ಕೆಲಸಗಾರರು ಹಾಗೂ ಮೌಲ್ಡಿಂಗ್ ಪ್ರೆಸ್ ಆಪರೇಟರ್ಸ್ | | |
| 11 | ಟ್ರಿಮ್ ಮಾಡುವ ಕೆಲಸಗಾರರು ಹಾಗೂ ಪಟ್ಟಿಗಳನ್ನು ಟ್ರಿಮ್ ಮತ್ತು ಚಪ್ಪಲಿಗಳನ್ನು ಒಟ್ಟು ಗೂಡಿಸುವವರು | | |
| 12 | ಹೊಸ ಮೇಕಿಂಗ್ ಕೆಲಸಗಾರರು | | |
| 13 | ಟೈರ್ ಮತ್ತು ಟ್ಯೂಬ್‌ಗಳ ತಯಾರಿಕೆಗಳ ಕೆಲಸಗಾರರು | | |
| 14 | ಕಟಿಂಗ್ ಪ್ರೆಸ್ ವರ್ಕರ್ಸ್ | | |
| 15 | ಲ್ಯಾಟಿಕ್ಸ್, ಫೋಮ್ ವಿಭಾಗದ ಫ್ಯಾಬ್ರಿಕೇಟರ್ಸ್ | | |
| 16 | ಸಿದ್ದಪಡಿಸುವ ಕೆಲಸಗಾರರು | | |
| 17 | ಸೈಕಲ್ ಟೈರ್ ಕೇಸ್ ಫಾರ್ಮಿಂಗ್ | | |
| 18 | ಪಾಲಿಥಿನ್ ಪ್ಯಾಕಿಂಗ್‌ಗಳ ಮೇಲೆ ಹೀಟ್ ಸೀಲಿಂಗ್ ಮಾಡುವ ಆಪರೇಟರ್ಸ್ | | |
| 19 | ಪ್ರಯೋಗ ಶಾಲೆಗಳಲ್ಲಿ ರಾಸಾಯನಿಕಗಳನ್ನು ತೂಕ ಮಾಡುವ ಕೆಲಸಗಾರರು | | |
| 20 | ರಿಟ್ರೇಡಿಂಗ್ ವಿಭಾಗದಲ್ಲಿ ಟೈರುಗಳನ್ನು ಹೊಲಿಯುವವರು, ಇತರೆ ಅರೆ ಕುಶಲ ಕಾರ್ಮಿಕರು | | |
| 21 | ಡ್ರೈವರ್ಸ್ | 4196–27 | 4125–92 |
| **4. ಕುಶಲರಲ್ಲದ ಕಾರ್ಮಿಕರು** | | | |
| 1 | ಹೆಲ್ಪರ್ | | |
| 2 | ಪ್ಯಾಕರ್ಸ್ | | |
| 3 | ಹೆಡ್‌ಲೋಡ್ ಕೆಲಸಗಾರ | | |
| 4 | ವಾಚ್‌ಮನ್ | | |
| 5 | ಕ್ಲೀನರ್ ಹಾಗೂ ಲಾರಿ ಕ್ಲೀನರ್ | 4036–77 | 3987–32 |
| 6 | ಲೋಡಿಂಗ್ ಅನ್ ಲೋಡಿಂಗ್ | | |
| 7 | ಪ್ಯೂನ್ : ಮಜ್ದೂರ್ | | |
| 8 | ಫೈಬರ್ ಡ್ರೈಯಿಂಗ್ ವರ್ಕರ್ಸ್ ಮತ್ತು ಫೈಬರ್ ರಬ್ಬರ್ ಉದ್ದಿಮೆಯಲ್ಲಿನ ಕೂಲಿಗಳು | | |
| 9 | ಸಾಮಾನುಗಳನ್ನು ಸಾಗಾಣಿಕೆ ಮಾಡುವ ಕೆಲಸಗಾರರು | | |
| 10 | ಸಂಖ್ಯೆಯನ್ನು ಗುರುತು ಮಾಡುವವರು | | |
| 11 | ರಬ್ಬರನ್ನು ತುಂಡು ಮಾಡುವ ಕೆಲಸಗಾರರು | | |
| 12 | ತೂಕ ಮಾಡುವ ಕೆಲಸಗಾರರು | | |
| 13 | ಯಾಂತ್ರಿಕ ವಿಭಾಗದ ಸಹಾಯಕರು (ಸರಕುಗಳನ್ನು ಎತ್ತುವ ಮತ್ತು ಸಾಗಿಸುವವರು) | 4036–77 | 3987–32 |
| 14 | ರವಾನೆ ಕೆಲಸಗಾರ | | |
| 15 | ಡ್ರೈಯಿಂಗ್ ಕೊಠಡಿಯ ಆಟೆಂಡರ್ಸ್ ಮತ್ತು ಟೈರ್ ರಿಟ್ರೇಡಿಂಗ್ ವಿಭಾಗದಲ್ಲಿ ಶುಚಿ ಮಾಡುವವರು ಇತರೆ ಕುಶಲರಲ್ಲದ ಕೆಲಸಗಾರರು | | |
| **5. ಕಛೇರಿ ಸಿಬ್ಬಂದಿ** | | | |
| 1 | ಅಕೌಟೆಂಟ್ | 4276–07 | 4242–47 |
| **2** | ಶೀಘ್ರಲಿಪಿಗಾರ | | |
| 3 | ಗುಮಾಸ್ತ | 4101–77 | 4047–17 |
| **4** | ಬೆರಳಚ್ಚುಗಾರ | | |
| 5 | ಆಫೀಸ್ ಬಾಯ್ | 3996–77 | 3987–32 |

| 1 | 2 | 3 | 4 |
|---|---|---|---|
| **6. ಉದ್ಯೋಗದ ವರ್ಗ** | | **ದಿನವೊಂದಕ್ಕೆ** | **ಪ್ರತಿ ತಿಂಗಳಿಗೆ** |
| 1 | ತುಂಡು ಆಧಾರದ ಮೇಲೆ ಮತ್ತು ಸೀಳುವಿಕೆ ಸಿಪ್ಪೆಗಳನ್ನು ನೆನೆ ಹಾಕಲು ಸಾಗಿಸುವಿಕೆ (1000 ಸಿಪ್ಪೆಗಳು) | | |
| **2** | ಸಾವಿರ ಸಿಪ್ಪೆಗಳಿಗೆ (1000) | | |
| 3 | ಚೂರಾದ ಸಿಪ್ಪೆಗಳನ್ನು ಗುಂಡಿಗಳಿಂದ ತೆಗೆಯುವುದು (1000) | | |
| 4 | ಕೆಟ್ಟುಹೋದ ಸಿಪ್ಪೆಗಳನ್ನು ಬಡಿಯುವುದು (ಕೆಟ್ಟುಹೋದ ಸಿಪ್ಪೆಗಳು) | | |
| 5 | ನಾರುಗಳನ್ನು ಹೊಸೆಯುವುದು<br>ಎ) 1.80 ಮೀಟರ್‌ಗೆ 100 ನಾರುಗಳ ಒಂದು ಕಟ್ಟಿಗೆ<br>ಬಿ) 2.15 ಮೀಟರ್‌ಗೆ 100 ನಾರುಗಳ ಒಂದು ಕಟ್ಟಿಗೆ<br>ಸಿ) 2.88 ಮೀಟರ್‌ಗೆ 100 ನಾರುಗಳ ಒಂದು ಕಟ್ಟಿಗೆ<br>ಡಿ) 3.60 ಮೀಟರ್‌ಗೆ 100 ನಾರುಗಳ ಒಂದು ಕಟ್ಟಿಗೆ<br>ಇ) 4.32 ಮೀಟರ್‌ಗೆ 100 ನಾರುಗಳ ಒಂದು ಕಟ್ಟಿಗೆ | 153–30 | 3985–30 |
| 6 | ಯಂತ್ರಗಳಿಂದ ಶುದ್ಧಿ ಮಾಡಿದ ನಾರುಗಳನ್ನು ಸರಬರಾಜು ಮಾಡಲು ಕನಿಷ್ಟ ವೇತನವನ್ನು ಗಮನಿಸುವುದು:<br>ಎ) 1.80 ಮೀಟರ್‌ಗೆ 100 ತೆಂಗಿನ ನಾರಿನ ಒಂದು ಕಟ್ಟಿಗೆ<br>ಬಿ) 2.15 ಮೀಟರ್‌ಗೆ 100 ತೆಂಗಿನ ನಾರಿನ ಒಂದು ಕಟ್ಟಿಗೆ<br>ಸಿ) 2.88 ಮೀಟರ್‌ಗೆ 100 ತೆಂಗಿನ ನಾರಿನ ಒಂದು ಕಟ್ಟಿಗೆ<br>ಡಿ) 3.60 ಮೀಟರ್‌ಗೆ 100 ತೆಂಗಿನ ನಾರಿನ ಒಂದು ಕಟ್ಟಿಗೆ<br>ಇ) 4.32 ಮೀಟರ್‌ಗೆ 100 ತೆಂಗಿನ ನಾರಿನ ಒಂದು ಕಟ್ಟಿಗೆ | | |
| 7 | ಹಗ್ಗ ತಯಾರಿಕೆ<br>ಎ) 33.ಕೆ.ಜಿ. ನಾರನ್ನು 4.50 ಸೆಂ.ಮೀಟರ್ ಹಗ್ಗವನ್ನು ತಯಾರಿಸಲು<br>ಬಿ) 33.ಕೆ.ಜಿ. ನಾರನ್ನು 5.00 ಸೆಂ.ಮೀಟರ್ ಹಗ್ಗವನ್ನು ತಯಾರಿಸಲು<br>ಸಿ) 33.ಕೆ.ಜಿ. ನಾರನ್ನು 10.00 ಸೆಂ.ಮೀಟರ್ ಹಗ್ಗವನ್ನು ತಯಾರಿಸಲು<br>ಡಿ) 33.ಕೆ.ಜಿ. ನಾರನ್ನು 3.80 ಸೆಂ.ಮೀಟರ್ ಹಗ್ಗವನ್ನು ತಯಾರಿಸಲು | 153–30 | 3985–30 |
| 8 | ಪುಟ್‌ರಗ್ ಮ್ಯಾಟ್ ಮೇಕಿಂಗ್ ಕಟ್ಟುಗಳನ್ನು ಕಟ್ಟಲು | | |
| 9 | ನಾರನ್ನು ಕಟ್ಟಲು 30 ಅಥವಾ 35 ಕೆ.ಜಿ. ನಾರನ್ನು ಕಟ್ಟಲು<br>ಎ) ಯಂತ್ರಗಳನ್ನು ಉಪಯೋಗಿಸಿ ಕಟ್ಟಲು ಅಥವಾ<br>ಬಿ) ಕೈಯಿಂದ ಕಟ್ಟಲು | | |

**ತುಟ್ಟಿಭತ್ಯೆ:–**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960–100) 3944 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 3944 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 4 ಪೈಸೆಯಂತೆ ತುಟ್ಟಿ ಭತ್ಯೆ ನೀಡತಕ್ಕದ್ದು.

ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2010 ರಿಂದ ಡಿಸೆಂಬರ್ 2010)ರ ಸರಾಸರಿ ಆಧಾರದ ಮೇಲೆ 2011 ಏಪ್ರಿಲ್ 1 ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ಮಾಸಿಕ ವೇತನ ದರಗಳನ್ನು 26 ದಿನಗಳಿಂದ ವಿಭಾಗಿಸಿ, 4 ರಜಾ ದಿನಗಳಿಗೆ ವೇತನವನ್ನು ನೀಡುವುದೂ ಸೇರಿದಂತೆ ಲೆಕ್ಕ ಹಾಕತಕ್ಕದ್ದು.

**ತುಟ್ಟಿಭತ್ಯೆಯನ್ನು ಲೆಕ್ಕಾಚಾರ ಮಾಡುವ ವಿಧಾನ**

ಅ) ಮಾಸಿಕ ವೇತನವನ್ನು ಪಡೆಯುವವರು:– ಪ್ರತಿ ವರ್ಷ ಹೆಚ್ಚಾಗುವ ಸಿ ಪಿ ಐ ಅಂಶಗಳು x ತುಟ್ಟಿಭತ್ಯೆಯ ದರ x 30 ದಿನಗಳು= ತುಟ್ಟಿಭತ್ಯೆ

ಆ) ದಿನಗೂಲಿ ವೇತನ ಪಡೆಯುವವರು :–

$$\frac{\text{ಪ್ರತಿ ವರ್ಷ ಹೆಚ್ಚಾಗುವ ಅಂಶಗಳು x ತುಟ್ಟಿಭತ್ಯೆಯ ದರ x 30 = ತುಟ್ಟಿಭತ್ಯೆ}}{26}$$

2. ಮಹಿಳೆಯರು ಮತ್ತು ಪುರುಷರು ಒಂದೇ ರೀತಿಯ ಕೆಲಸವನ್ನು ನಿರ್ವಹಿಸಿದ ಸಂದರ್ಭಗಳಲ್ಲಿ ಉಭಯತ್ರರಿಗೂ ಸಮಾನ ದರದ ವೇತನಗಳನ್ನು ಸಂದಾಯ ಮಾಡತಕ್ಕದ್ದು

3. ಪ್ರಸ್ತುತ ಪಾವತಿಸುತ್ತಿರುವ ವೇತನ ದರವು ಹೆಚ್ಚಾಗಿದ್ದಲ್ಲಿ ಆ ಹೆಚ್ಚಾಗಿರುವ ದರಗಳ ವೇತನವನ್ನು ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು.

4. ಅಧಿಸೂಚನೆಯಲ್ಲಿ ವರ್ಗವನ್ನು ನಮೂದಿಸದೆ ಇರುವ ವರ್ಗಗಳ ಕಾರ್ಮಿಕರಿಗೆ ಅದೇ ಸ್ವರೂಪದ ಕೆಲಸ ನಿರ್ವಹಿಸುತ್ತಿರುವ ಇತರೆ ವರ್ಗದ ಕಾರ್ಮಿಕರಿಗೆ ಪಾವತಿ ಮಾಡುತ್ತಿರುವ ವೇತನವನ್ನು ಸಂದಾಯ ಮಾಡತಕ್ಕದ್ದು.

5. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಳಿಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ಅಂತಹ ಕಡಿಮೆ ಅವಧಿಗೆ ಅನುಗುಣವಾಗಿ ವೇತನವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.

6. ದಿನಗೂಲಿ ನೌಕರರಿಗೆ ಅವರ ದಿನದ ವೇತನ ದರಗಳನ್ನು ಕಂಡು ಹಿಡಿಯಬೇಕಾದಲ್ಲಿ ತಿಂಗಳ ವೇತನ ದರವನ್ನು 26 ರಿಂದ ಭಾಗಿಸಬೇಕು. ಭಾಗಿಸಿದಾಗ ಬಂದ ದರವು ಭಿನ್ನಾಂಕವಾಗಿದ್ದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸಬೇಕು.

7. ಸಂಸ್ಥೆಯಲ್ಲಿ ನಿಗದಿಪಡಿಸಿರುವ ವಾರದ ರಜೆ ಅಥವಾ ಹಬ್ಬದ ರಜಾ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನ ಕಾಯ್ದೆ ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡುಪಟ್ಟು ವೇತನವನ್ನು ಪಾವತಿ ಮಾಡತಕ್ಕದ್ದು.

8. ಕೆಲಸಗಾರರು ದಿನದ ನಿಗಧಿತ ಅವಧಿಗಿಂತ ಹೆಚ್ಚು ಸಮಯ ಕೆಲಸ ನಿರ್ವಹಿಸಿದಲ್ಲಿ ಅಂತಹ ಹೆಚ್ಚುವರಿ ಅವಧಿ ಕೆಲಸಕ್ಕೆ ಆತನ ವೇತನದ ಎರಡುಪಟ್ಟು ವೇತನವನ್ನು ಪಾವತಿಸತಕ್ಕದ್ದು.

9. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.

10. ಟ್ರೈನಿಗಳಿಗೆ ಆ ವರ್ಗದ ನೌಕರರು ಪಡೆಯುತ್ತಿರುವ ವೇತನದ ಪ್ರತಿಶತ 75 ರಷ್ಟು ವೇತನವನ್ನು ಶಿಷ್ಯ ವೇತನವನ್ನಾಗಿ ಪಾವತಿಸತಕ್ಕದ್ದು.

ವಲಯ–1 : ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಮತ್ತು ಗೊತ್ತುಪಡಿಸಿದ ಆಗ್ಲೋಮರೇಷನ್ ಪ್ರದೇಶಗಳು ಹಾಗೂ ರಾಜ್ಯದ ಎಲ್ಲಾ ಮಹಾನಗರಪಾಲಿಕೆಗಳು.

ವಲಯ–2 : ವಲಯ–1ರಲ್ಲಿ ನಮೂದಿಸಿರುವ ಪ್ರದೇಶಗಳನ್ನು ಹೊರತುಪಡಿಸಿ ರಾಜ್ಯದ ಇತರೆ ಭಾಗಗಳು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

# ವಿಶೇಷ ಪತ್ರಿಕೆ



| ಭಾಗ – IV-A | ಬೆಂಗಳೂರು, ಬುಧವಾರ, ಸೆಪ್ಟೆಂಬರ್ ೧೪, ೨೦೧೧ (ಭಾದ್ರಪದ ೨೩, ಶಕ ವರ್ಷ ೧೯೩೩) | ನಂ. ೮೨೧ |
|---|---|---|



## ಕಾರ್ಮಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಾಇ 11 ಎಲ್ಎಂಡಬ್ಲ್ಯೂ 2009, ಬೆಂಗಳೂರು, ದಿನಾಂಕ: 14–09–2011**

ಕರ್ನಾಟಕ ರಾಜ್ಯಾದ್ಯಂತ **"ಭದ್ರತಾ ಏಜೆನ್ಸಿ"** ಉದ್ದಿಮೆಯಲ್ಲಿನ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕರಿಗೆ ಕನಿಷ್ಠ ವೇತನವನ್ನು ಪರಿಷ್ಕರಿಸಲು ಸರ್ಕಾರದ ಕರಡು ಪ್ರಸ್ತಾವನೆಯನ್ನು ದಿನಾಂಕ: 4–3–2011ರ ಕರ್ನಾಟಕ ರಾಜ್ಯ ಪತ್ರದ ಭಾಗ–4[ಎ]ರಲ್ಲಿ ಪ್ರಕಟಿಸಿ, ಕನಿಷ್ಠ ವೇತನ ಕಾಯ್ದೆ

1948 [ಕೇಂದ್ರಾಧಿನಿಯಮ ಸಂಖ್ಯೆ: 11] ರ ಸೆಕ್ಷನ್ 5(1)(ಬಿ) ಪ್ರಕಾರ ಇದರಿಂದ ಭಾಧಿತರಾಗುವ/ ಸಂಬಂಧವಿರುವ ವ್ಯಕ್ತಿಗಳ ಗಮನಕ್ಕೆ ತರಲಾಗಿದ್ದು, ಅವರಿಂದ ಸಲಹೆ/ಆಕ್ಷೇಪಣೆಗಳನ್ನು ಸ್ವೀಕರಿಸಲು 2 ತಿಂಗಳ ಕಾಲಾವಧಿಯನ್ನು ನೀಡಲಾಗಿತ್ತು. ಈ ಅವಧಿಯಲ್ಲಿ ಯಾವುದೇ ಸಲಹೆ/ಆಕ್ಷೇಪಣೆಗಳು ಸರ್ಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ. ಕರಡು ಪ್ರಸ್ತಾವನೆಯನ್ನು ರಾಜ್ಯ ಕನಿಷ್ಠ ವೇತನ ಸಲಹಾ ಮಂಡಳಿಯ ಮುಂದೆ ಮಂಡಿಸಲಾಗಿತ್ತು. ಸರ್ಕಾರದ ಪ್ರಸ್ತಾವನೆಯನ್ನು ಸುಧೀರ್ಘವಾಗಿ ಸಮಾಲೋಚಿಸಿ ಅಂತಿಮ ಅಧಿಸೂಚನೆಯನ್ನು ಹೊರಡಿಸಲು ಮಂಡಳಿಯು ಸರ್ಕಾರಕ್ಕೆ ತನ್ನ ಶಿಫಾರಸ್ಸನ್ನು ನೀಡಿರುತ್ತದೆ.

ಕರ್ನಾಟಕ ರಾಜ್ಯ ಕನಿಷ್ಠ ವೇತನ ಸಲಹಾ ಮಂಡಳಿಯ ಶಿಫಾರಸ್ಸನ್ನು ಪರಿಗಣನೆಗೆ ತೆಗೆದುಕೊಂಡು, ಕನಿಷ್ಠ ವೇತನ ಕಾಯ್ದೆ 1948 [ಕೇಂದ್ರಾಧಿನಿಯಮ ಸಂಖ್ಯೆ: 11] ರ ಸೆಕ್ಷನ್ 3(1)(ಬಿ) ಹಾಗೂ 5(1)(ಬಿ) ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮತ್ತು ಈ ಹಿಂದಿನ ಎಲ್ಲಾ ಅಧಿಸೂಚನೆಗಳನ್ನು ರದ್ದುಪಡಿಸಿ, ಕರ್ನಾಟಕ ರಾಜ್ಯಾದ್ಯಂತ ಯಾವುದೇ **"ಭದ್ರತಾ ಏಜೆನ್ಸಿ"** ಉದ್ದಿಮೆಯ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕ ವರ್ಗದವರಿಗೆ ದಿನಾಂಕ: 1–4–2011 ರಿಂದ ಜಾರಿಗೆ ಬರುವಂತೆ ಕನಿಷ್ಠ ವೇತನವನ್ನು ಈ ಅಧಿಸೂಚನೆಯ ಅನುಸೂಚಿಯಲ್ಲಿ ಇರುವಂತೆ ಪರಿಷ್ಕರಿಸಲಾಗಿದೆ.

**ಅನುಸೂಚಿ**

| ಕ್ರ. ಸಂ | ಕೆಲಸದ ವರ್ಗಗಳು | ಕನಿಷ್ಠ ವೇತನ ದರಗಳು ಪ್ರತಿ ತಿಂಗಳಿಗೆ [ರೂಪಾಯಿಗಳಲ್ಲಿ] | |
|---|---|---|---|
| | | ವಲಯ–1 | ವಲಯ–2 |
| 1 | 2 | 3 | 4 |
| 1 | ಸೆಕ್ಯೂರಿಟಿ ಸೂಪರ್‌ವೈಸರ್ | 5231–46 | 4949–81 |
| 2 | ಸೆಕ್ಯೂರಿಟಿ ಆಫೀಸರ್ | | |
| 3 | ಫೀಲ್ಡ್ ಆಫೀಸರ್ | | |
| 4 | ಮ್ಯಾನೇಜರ್ | | |
| 5 | ಸೆಕ್ಯೂರಿಟಿ ಇನ್ಸ್‌ಪೆಕ್ಟರ್ | 4828–00 | 4736–55 |
| 6 | ಸಹಾಯಕ ಸೆಕ್ಯೂರಿಟಿ ಆಫೀಸರ್ | | |
| 7 | ಹೆಡ್‌ಗಾರ್ಡ್ | 4649–71 | 4348–57 |
| 8 | ಇಂಟಲಿಜೆನ್ಸ್ ಮತ್ತು ಫೈರ್‌ಫೈಟಿಂಗ್ | 4459–91 | 4376–75 |
| 9 | ಸೆಕ್ಯೂರಿಟಿ ಗಾರ್ಡ್ | | |
| 10 | ಅಸಿಸ್ಟೆಂಟ್ | | |
| 11 | ಲೇಡಿ ಗಾರ್ಡ್ / ಲೇಡಿ ನರ್ಸ್ | | |
| 12 | ಸೂಪರ್‌ವೈಸರ್ | 4646–46 | 4601–41 |
| 13 | ಅಕೌಂಟೆಂಟ್ | | |
| 14 | ಕ್ಯಾಷಿಯರ್ | | |
| 15 | ಶೀಘ್ರಲಿಪಿಗಾರರು | | |
| 16 | ಗುಮಾಸ್ತ | 4553–11 | 4508–76 |
| 17 | ಬೆರಳಚ್ಚುಗಾರ | | |
| 18 | ಸ್ವಾಗತಕಾರರು | | |
| 19 | ಕಂಪ್ಯೂಟರ್ ಆಪರೇಟರ್ | | |
| 20 | ಡ್ರೈವರ್ | | |
| 21 | ಅಟೆಂಡರ್ | 4373–46 | 4359–28 |
| 22 | ಆಫೀಸ್ ಬಾಯ್ | | |
| 23 | ಜವಾನ | | |

**ತುಟ್ಟಿಭತ್ಯೆ:–**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960–100) 3944 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 3944 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 4 ಪೈಸೆಯಂತೆ ತುಟ್ಟಿ ಭತ್ಯೆ ನೀಡತಕ್ಕದ್ದು.

ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2010 ರಿಂದ ಡಿಸೆಂಬರ್ 2010)ರ ಸರಾಸರಿ ಆಧಾರದ ಮೇಲೆ 2011 ಏಪ್ರಿಲ್ 1 ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ಮಾಸಿಕ ವೇತನ ದರಗಳನ್ನು 26 ದಿನಗಳಿಂದ ವಿಭಾಗಿಸಿ, 4 ರಜಾ ದಿನಗಳಿಗೆ ವೇತನವನ್ನು ನೀಡುವುದೂ ಸೇರಿದಂತೆ ಲೆಕ್ಕ ಹಾಕತಕ್ಕದ್ದು.

**ತುಟ್ಟಿಭತ್ಯೆಯನ್ನು ಲೆಕ್ಕಾಚಾರ ಮಾಡುವ ವಿಧಾನ:**

ಅ) ಮಾಸಿಕ ವೇತನವನ್ನು ಪಡೆಯುವವರು:–

ಪ್ರತಿ ವರ್ಷ ಹೆಚ್ಚಾಗುವ ಸಿ.ಪಿ.ಐ ಅಂಶಗಳು x ತುಟ್ಟಿಭತ್ಯೆಯ ದರ x 30 ದಿನಗಳು= ತುಟ್ಟಿಭತ್ಯೆ

ಆ) ದಿನಗೂಲಿ ವೇತನವನ್ನು ಪಡೆಯುವವರು:–

$$\frac{\text{ಪ್ರತಿ ವರ್ಷ ಹೆಚ್ಚಾಗುವ ಅಂಶಗಳು x ತುಟ್ಟಿಭತ್ಯೆಯ ದರ x 30 ದಿನಗಳು}}{26} = \text{ತುಟ್ಟಿಭತ್ಯೆ}$$

2. ಮಹಿಳೆಯರು ಮತ್ತು ಪುರುಷರು ಒಂದೇ ರೀತಿಯ ಕೆಲಸವನ್ನು ನಿರ್ವಹಿಸಿದ ಸಂದರ್ಭಗಳಲ್ಲಿ ಉಭಯತ್ರರಿಗೂ ಸಮಾನ ದರದ ವೇತನಗಳನ್ನು ಸಂದಾಯ ಮಾಡತಕ್ಕದ್ದು.

3. ಪ್ರಸ್ತುತ ಪಾವತಿಸುತ್ತಿರುವ ವೇತನ ದರವು ಹೆಚ್ಚಾಗಿದ್ದಲ್ಲಿ ಆ ಹೆಚ್ಚಾಗಿರುವ ದರಗಳ ವೇತನವನ್ನು ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು.

4. ಅಧಿಸೂಚನೆಯಲ್ಲಿ ವರ್ಗವನ್ನು ನಮೂದಿಸದೆ ಇರುವ ವರ್ಗಗಳ ಕಾರ್ಮಿಕರಿಗೆ ಅದೇ ಸ್ವರೂಪದ ಕೆಲಸ ನಿರ್ವಹಿಸುತ್ತಿರುವ ಇತರೆ ವರ್ಗದ ಕಾರ್ಮಿಕರಿಗೆ ಪಾವತಿ ಮಾಡುತ್ತಿರುವ ವೇತನವನ್ನು ಸಂದಾಯ ಮಾಡತಕ್ಕದ್ದು.

5. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಳಿಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ಅಂತಹ ಕಡಿಮೆ ಅವಧಿಗೆ ಅನುಗುಣವಾಗಿ ವೇತನವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.

6. ದಿನಗೂಲಿ ನೌಕರರಿಗೆ ಅವರ ದಿನದ ವೇತನ ದರಗಳನ್ನು ಕಂಡು ಹಿಡಿಯಬೇಕಾದಲ್ಲಿ ತಿಂಗಳ ವೇತನ ದರವನ್ನು 26 ರಿಂದ ಭಾಗಿಸಬೇಕು. ಭಾಗಿಸಿದಾಗ ಬಂದ ದರವು ಭಿನ್ನಾಂಕವಾಗಿದ್ದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸಬೇಕು.

7. ಸಂಸ್ಥೆಯಲ್ಲಿ ನಿಗದಿಪಡಿಸಿರುವ ವಾರದ ರಜೆ ಅಥವಾ ಹಬ್ಬದ ರಜಾ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನ ಕಾಯ್ದೆ ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡುಪಟ್ಟು ವೇತನವನ್ನು ಪಾವತಿ ಮಾಡತಕ್ಕದ್ದು.

8. ಕೆಲಸಗಾರರು ದಿನದ ನಿಗಧಿತ ಅವಧಿಗಿಂತ ಹೆಚ್ಚು ಸಮಯ ಕೆಲಸ ನಿರ್ವಹಿಸಿದಲ್ಲಿ ಅಂತಹ ಹೆಚ್ಚುವರಿ ಅವಧಿ ಕೆಲಸಕ್ಕೆ ಆತನ ವೇತನದ ಎರಡುಪಟ್ಟು ವೇತನವನ್ನು ಪಾವತಿಸತಕ್ಕದ್ದು.

9. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.

10. ಟ್ರೈನಿಗಳಿಗೆ ಆ ವರ್ಗದ ನೌಕರರು ಪಡೆಯುತ್ತಿರುವ ವೇತನದ ಪ್ರತಿಶತ 75 ರಷ್ಟು ವೇತನವನ್ನು ಶಿಷ್ಯ ವೇತನವನ್ನಾಗಿ ಪಾವತಿಸತಕ್ಕದ್ದು.

11. ಭದ್ರತಾ ಅಧಿಕಾರಿಗಳು ಮತ್ತು ಭದ್ರತಾ ಕಾರ್ಮಿಕರಿಗೆ ವರ್ಷಕೊಮ್ಮೆ ಒಂದು ಜೊತೆ ಬೂಟ್ಸ್ ಮತ್ತು 2 ಜೊತೆ ಕಾಲು ಚೀಲ ಕೊಡತಕ್ಕದ್ದು.

12. ಎರಡು ವರ್ಷಕ್ಕೊಮ್ಮೆ ರಾತ್ರಿ ಕಾವಲುಗಾರರಿಗೆ ಮಫ್ಲರ್, ಸ್ವೆಟರ್ ಕೊಡತಕ್ಕದ್ದು.

13. ಎರಡು ವರ್ಷಕ್ಕೊಮ್ಮೆ 2 ಜೊತೆ ಸಮವಸ್ತ್ರ, ಟೋಪಿ [ಕ್ಯಾಪ್ ಅಥವಾ ಹ್ಯಾಟ್] ಕೊಡತಕ್ಕದ್ದು ಹಾಗೂ ವಾಷಿಂಗ್ ಅಲೋಯನ್ಸ್ ಮಾಸಿಕ ರೂ. 250–00 ಗಳಂತೆ ಕೊಡತಕ್ಕದ್ದು.

14. ಎರಡು ವರ್ಷಕ್ಕೊಮ್ಮೆ ಬೆಲ್ಟ್ ಕೊಡತಕ್ಕದ್ದು.

15. ರಾತ್ರಿ ಕಾವಲುಗಾರರಿಗೆ ಬ್ಯಾಟರಿ ಮತ್ತು ಟಾರ್ಚ್ ಒದಗಿಸತಕ್ಕದ್ದು.

16. ಈಗಾಗಲೇ ಇತರೇ ಸೌಲಭ್ಯಗಳನ್ನು ನೀಡುತ್ತಿದ್ದಲ್ಲಿ ಅದನ್ನು ಮುಂದುವರೆಸತಕ್ಕದ್ದು.

ವಲಯ–1 : ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಮತ್ತು ಗೊತ್ತುಪಡಿಸಿದ ಆಗ್ಲೋಮರೇಷನ್ ಪ್ರದೇಶಗಳು ಹಾಗೂ ರಾಜ್ಯದ ಎಲ್ಲಾ ಮಹಾನಗರ ಪಾಲಿಕೆಗಳು.

ವಲಯ–2 : ವಲಯ–1ರಲ್ಲಿ ನಮೂದಿಸಿರುವ ಪ್ರದೇಶಗಳನ್ನು ಹೊರತುಪಡಿಸಿ ರಾಜ್ಯದ ಇತರೆ ಭಾಗಗಳು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

# ವಿಶೇಷ ಪತ್ರಿಕೆ

ಭಾಗ – **IV-A** ಬೆಂಗಳೂರು, ಬುಧವಾರ, ಸೆಪ್ಟೆಂಬರ್ ೧೪, ೨೦೧೧ (ಭಾದ್ರಪದ ೨೩, ಶಕ ವರ್ಷ ೧೯೩೩) ನಂ. ೮೨೨

## ಕಾರ್ಮಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಾಇ 94 ಎಲ್ಎಂಡಬ್ಲ್ಯೂ 2009, ಬೆಂಗಳೂರು, ದಿನಾಂಕ: 14–09–2011**

ಕರ್ನಾಟಕ ರಾಜ್ಯಾದ್ಯಂತ "**ಮಂಡಕ್ಕಿ ಭಟ್ಟಿ**" ಉದ್ದಿಮೆಯಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನವನ್ನು ಪರಿಷ್ಕರಿಸಲು ಸರ್ಕಾರದ ಕರಡು ಪ್ರಸ್ತಾವನೆಯನ್ನು ದಿನಾಂಕ: 24–2–2011ರ ಕರ್ನಾಟಕ ರಾಜ್ಯ ಪತ್ರದ ಭಾಗ–4[ಎ]ರಲ್ಲಿ ಪ್ರಕಟಿಸಿ, ಕನಿಷ್ಠ ವೇತನ ಕಾಯ್ದೆ 1948 [ಕೇಂದ್ರಾಧಿನಿಯಮ ಸಂಖ್ಯೆ: 11] ರ ಸೆಕ್ಷನ್ 5(1)(ಬಿ) ಪ್ರಕಾರ ಇದರಿಂದ ಭಾಧಿತರಾಗುವ/ ಸಂಬಂಧವಿರುವ ವ್ಯಕ್ತಿಗಳ ಗಮನಕ್ಕೆ ತರಲಾಗಿದ್ದು, ಅವರಿಂದ ಸಲಹೆ/ಆಕ್ಷೇಪಣೆಗಳನ್ನು ಸ್ವೀಕರಿಸಲು 2 ತಿಂಗಳ ಕಾಲಾವಧಿಯನ್ನು ನೀಡಲಾಗಿತ್ತು. ಈ ಅವಧಿಯಲ್ಲಿ ಯಾವುದೇ ಸಲಹೆ/ಆಕ್ಷೇಪಣೆಗಳು ಸರ್ಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ. ಕರಡು ಪ್ರಸ್ತಾವನೆಯನ್ನು ರಾಜ್ಯ ಕನಿಷ್ಠ ವೇತನ ಸಲಹಾ ಮಂಡಳಿಯ ಮುಂದೆ ಮಂಡಿಸಲಾಗಿತ್ತು. ಸರ್ಕಾರದ ಪ್ರಸ್ತಾವನೆಯನ್ನು ಸುಧೀರ್ಘವಾಗಿ ಸಮಾಲೋಚಿಸಿ ಅಂತಿಮ ಅಧಿಸೂಚನೆಯನ್ನು ಹೊರಡಿಸಲು ಮಂಡಳಿಯು ಸರ್ಕಾರಕ್ಕೆ ತನ್ನ ಶಿಫಾರಸ್ಸನ್ನು ನೀಡಿರುತ್ತದೆ.

ಕರ್ನಾಟಕ ರಾಜ್ಯ ಕನಿಷ್ಠ ವೇತನ ಸಲಹಾ ಮಂಡಳಿಯ ಶಿಫಾರಸ್ಸನ್ನು ಪರಿಗಣನೆಗೆ ತೆಗೆದುಕೊಂಡು, ಕನಿಷ್ಠ ವೇತನ ಕಾಯ್ದೆ 1948 [ಕೇಂದ್ರಾಧಿನಿಯಮ ಸಂಖ್ಯೆ: 11] ರ ಸೆಕ್ಷನ್ 3(1)(ಬಿ) ಹಾಗೂ 5(1)(ಬಿ) ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮತ್ತು ಈ ಹಿಂದಿನ ಎಲ್ಲಾ ಅಧಿಸೂಚನೆಗಳನ್ನು ರದ್ದುಪಡಿಸಿ, ಕರ್ನಾಟಕ ರಾಜ್ಯಾದ್ಯಂತ ಯಾವುದೇ "**ಮಂಡಕ್ಕಿ ಭಟ್ಟಿ**" ಉದ್ದಿಮೆಯ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕ ವರ್ಗದವರಿಗೆ ದಿನಾಂಕ: 1–4–2011 ರಿಂದ ಜಾರಿಗೆ ಬರುವಂತೆ ಕನಿಷ್ಠ ವೇತನವನ್ನು ಈ ಅಧಿಸೂಚನೆಯ ಅನುಸೂಚಿಯಲ್ಲಿ ಇರುವಂತೆ ಪರಿಷ್ಕರಿಸಲಾಗಿದೆ.

**ಅನುಸೂಚಿ**

| ಕ್ರ. ಸಂ. | ಕೆಲಸದ ವರ್ಗಗಳು | ಕನಿಷ್ಠ ವೇತನ ದರಗಳು ಪ್ರತಿ ದಿನಕ್ಕೆ. [ರೂಪಾಯಿಗಳಲ್ಲಿ] |
|---|---|---|
| 1 | 2 | 3 |
| 1 | ಪುರಿ ಹುರಿಯುವುದು, ಭತ್ತ ಹುರಿಯುವುದು | 150–00 |
| 2 | ಭತ್ತ ಪಾಲಿಷರ್, ಭತ್ತ ಸ್ವಚ್ಛತೆಗಾರ | 135–00 |
| 3 | ಡ್ರೈವರ್ | 150–00 |
| 4 | ಕ್ಲರ್ಕ್ | 135–00 |
| 5 | ಸಹಾಯಕ ಹಾಗೂ ಇತರೆ ಎಲ್ಲಾ ಅರೆ ಕುಶಲ ಕೆಲಸಗಾರರು | 130–00 |
| 6 | ಕುಶಲರಲ್ಲದವರು | 125–00 |

**ತುಟ್ಟಿಭತ್ಯೆ:–**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960–100) 3944 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 3944 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 4 ಪೈಸೆಯಂತೆ ತುಟ್ಟಿ ಭತ್ಯೆ ನೀಡತಕ್ಕದ್ದು.

ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2010 ರಿಂದ ಡಿಸೆಂಬರ್ 2010)ರ ಸರಾಸರಿ ಆಧಾರದ ಮೇಲೆ 2011 ಏಪ್ರಿಲ್ 1 ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ಮಾಸಿಕ ವೇತನ ದರಗಳನ್ನು 26 ದಿನಗಳಿಂದ ವಿಭಾಗಿಸಿ, 4 ರಜಾ ದಿನಗಳಿಗೆ ವೇತನವನ್ನು ನೀಡುವುದೂ ಸೇರಿದಂತೆ ಲೆಕ್ಕ ಹಾಕತಕ್ಕದ್ದು.

**ತುಟ್ಟಿಭತ್ಯೆಯನ್ನು ಲೆಕ್ಕಾಚಾರ ಮಾಡುವ ವಿಧಾನ:**

ಅ) ಮಾಸಿಕ ವೇತನವನ್ನು ಪಡೆಯುವವರು:–

ಪ್ರತಿ ವರ್ಷ ಹೆಚ್ಚಾಗುವ ಸಿ.ಪಿ.ಐ ಅಂಶಗಳು x ತುಟ್ಟಿಭತ್ಯೆಯ ದರ x 30 ದಿನಗಳು= ತುಟ್ಟಿಭತ್ಯೆ

ಆ) ದಿನಗೂಲಿ ವೇತನ ಪಡೆಯುವವರು :–

$$\frac{\text{ಪ್ರತಿ ವರ್ಷ ಹೆಚ್ಚಾಗುವ ಅಂಶಗಳು x ತುಟ್ಟಿಭತ್ಯೆಯ ದರ x 30 = ತುಟ್ಟಿಭತ್ಯೆ}}{26}$$

2. ಮಹಿಳೆಯರು ಮತ್ತು ಪುರುಷರು ಒಂದೇ ರೀತಿಯ ಕೆಲಸವನ್ನು ನಿರ್ವಹಿಸಿದ ಸಂದರ್ಭಗಳಲ್ಲಿ ಉಭಯತ್ರರಿಗೂ ಸಮಾನ ದರದ ವೇತನಗಳನ್ನು ಸಂದಾಯ ಮಾಡತಕ್ಕದ್ದು.

3. ಪ್ರಸ್ತುತ ಪಾವತಿಸುತ್ತಿರುವ ವೇತನ ದರವು ಹೆಚ್ಚಾಗಿದ್ದಲ್ಲಿ ಆ ಹೆಚ್ಚಾಗಿರುವ ದರಗಳ ವೇತನವನ್ನು ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು.

4. ಅಧಿಸೂಚನೆಯಲ್ಲಿ ವರ್ಗವನ್ನು ನಮೂದಿಸದೆ ಇರುವ ವರ್ಗಗಳ ಕಾರ್ಮಿಕರಿಗೆ ಅದೇ ಸ್ವರೂಪದ ಕೆಲಸ ನಿರ್ವಹಿಸುತ್ತಿರುವ ಇತರೆ ವರ್ಗದ ಕಾರ್ಮಿಕರಿಗೆ ಪಾವತಿ ಮಾಡುತ್ತಿರುವ ವೇತನವನ್ನು ಸಂದಾಯ ಮಾಡತಕ್ಕದ್ದು.

5. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಳಿಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ಅಂತಹ ಕಡಿಮೆ ಅವಧಿಗೆ ಅನುಗುಣವಾಗಿ ವೇತನವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.

6. ದಿನಗೂಲಿ ನೌಕರರಿಗೆ ಅವರ ದಿನದ ವೇತನ ದರಗಳನ್ನು ಕಂಡು ಹಿಡಿಯಬೇಕಾದಲ್ಲಿ ತಿಂಗಳ ವೇತನ ದರವನ್ನು 26 ರಿಂದ ಭಾಗಿಸಬೇಕು. ಭಾಗಿಸಿದಾಗ ಬಂದ ದರವು ಭಿನ್ನಾಂಕವಾಗಿದ್ದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸಬೇಕು.

7. ಸಂಸ್ಥೆಯಲ್ಲಿ ನಿಗದಿಪಡಿಸಿರುವ ವಾರದ ರಜೆ ಅಥವಾ ಹಬ್ಬದ ರಜಾ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನ ಕಾಯ್ದೆ ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡುಪಟ್ಟು ವೇತನವನ್ನು ಪಾವತಿ ಮಾಡತಕ್ಕದ್ದು.

8. ಕೆಲಸಗಾರರು ದಿನದ ನಿಗಧಿತ ಅವಧಿಗಿಂತ ಹೆಚ್ಚು ಸಮಯ ಕೆಲಸ ನಿರ್ವಹಿಸಿದಲ್ಲಿ ಅಂತಹ ಹೆಚ್ಚುವರಿ ಅವಧಿ ಕೆಲಸಕ್ಕೆ ಆತನ ವೇತನದ ಎರಡುಪಟ್ಟು ವೇತನವನ್ನು ಪಾವತಿಸತಕ್ಕದ್ದು.

9. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.

10. ಟ್ರೈನಿಗಳಿಗೆ ಆ ವರ್ಗದ ನೌಕರರು ಪಡೆಯುತ್ತಿರುವ ವೇತನದ ಪ್ರತಿಶತ 75 ರಷ್ಟು ವೇತನವನ್ನು ಶಿಷ್ಯ ವೇತನವನ್ನಾಗಿ ಪಾವತಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಬುಧವಾರ, ಸೆಪ್ಟೆಂಬರ್ ೧೪, ೨೦೧೧ (ಭಾದ್ರಪದ ೨೩, ಶಕ ವರ್ಷ ೧೯೩೩) | ನಂ. ೮೨೩ |
|---|---|---|

## ಕಾರ್ಮಿಕ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಕಾಇ 65 ಎಲ್‌ಎಂಡಬ್ಲ್ಯೂ 2010, ಬೆಂಗಳೂರು, ದಿನಾಂಕ: 14–09–2011

ಕರ್ನಾಟಕ ರಾಜ್ಯಾದ್ಯಂತ "**ಏಲಕ್ಕಿ ಮಲೈಗಳು ಮತ್ತು ಏಲಕ್ಕಿ ತೋಟ**" ಉದ್ದಿಮೆಯಲ್ಲಿನ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕರಿಗೆ ಕನಿಷ್ಠ ವೇತನವನ್ನು ಪರಿಷ್ಕರಿಸಲು ಸರ್ಕಾರದ ಕರಡು ಪ್ರಸ್ತಾವನೆಯನ್ನು ದಿನಾಂಕ: 24–03–2011ರ ಕರ್ನಾಟಕ ರಾಜ್ಯ ಪತ್ರದ ಭಾಗ–4[ಎ]ರಲ್ಲಿ ಪ್ರಕಟಿಸಿ, ಕನಿಷ್ಠ ವೇತನ ಕಾಯ್ದೆ 1948 [ಕೇಂದ್ರಾಧಿನಿಯಮ ಸಂಖ್ಯೆ: 11] ರ ಸೆಕ್ಷನ್ 5(1)(ಬಿ) ಪ್ರಕಾರ ಇದರಿಂದ ಭಾಧಿತರಾಗುವ/ ಸಂಬಂಧವಿರುವ ವ್ಯಕ್ತಿಗಳ ಗಮನಕ್ಕೆ ತರಲಾಗಿದ್ದು, ಅವರಿಂದ ಸಲಹೆ/ಆಕ್ಷೇಪಣೆಗಳನ್ನು ಸ್ವೀಕರಿಸಲು 2 ತಿಂಗಳ ಕಾಲಾವಧಿಯನ್ನು ನೀಡಲಾಗಿತ್ತು. ಈ ಅವಧಿಯಲ್ಲಿ ಯಾವುದೇ ಸಲಹೆ/ಆಕ್ಷೇಪಣೆಗಳು ಸರ್ಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ. ಕರಡು ಪ್ರಸ್ತಾವನೆಯನ್ನು ರಾಜ್ಯ ಕನಿಷ್ಠ ವೇತನ ಸಲಹಾ ಮಂಡಳಿಯ ಮುಂದೆ ಮಂಡಿಸಲಾಗಿತ್ತು. ಸರ್ಕಾರದ ಪ್ರಸ್ತಾವನೆಯನ್ನು ಸುಧೀರ್ಘವಾಗಿ ಸಮಾಲೋಚಿಸಿ ಅಂತಿಮ ಅಧಿಸೂಚನೆಯನ್ನು ಹೊರಡಿಸಲು ಮಂಡಳಿಯು ಸರ್ಕಾರಕ್ಕೆ ತನ್ನ ಶಿಫಾರಸ್ಸನ್ನು ನೀಡಿರುತ್ತದೆ.

ಕರ್ನಾಟಕ ರಾಜ್ಯ ಕನಿಷ್ಠ ವೇತನ ಸಲಹಾ ಮಂಡಳಿಯ ಶಿಫಾರಸ್ಸನ್ನು ಪರಿಗಣನೆಗೆ ತೆಗೆದುಕೊಂಡು, ಕನಿಷ್ಠ ವೇತನ ಕಾಯ್ದೆ 1948 [ಕೇಂದ್ರಾಧಿನಿಯಮ ಸಂಖ್ಯೆ: 11] ರ ಸೆಕ್ಷನ್ 3(1)(ಬಿ) ಹಾಗೂ 5(1)(ಬಿ) ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮತ್ತು ಈ ಹಿಂದಿನ ಎಲ್ಲಾ ಅಧಿಸೂಚನೆಗಳನ್ನು ರದ್ದುಪಡಿಸಿ, ಕರ್ನಾಟಕ ರಾಜ್ಯಾದ್ಯಂತ ಯಾವುದೇ "**ಏಲಕ್ಕಿ ಮಲೈಗಳು ಮತ್ತು ಏಲಕ್ಕಿ ತೋಟ**" ಉದ್ದಿಮೆಯ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕ ವರ್ಗದವರಿಗೆ ದಿನಾಂಕ: 1–4–2011 ರಿಂದ ಅನ್ವಯವಾಗುವಂತೆ ಕನಿಷ್ಠ ವೇತನವನ್ನು ಈ ಅಧಿಸೂಚನೆಯ ಅನುಸೂಚಿಯಲ್ಲಿ ಇರುವಂತೆ ಪರಿಷ್ಕರಿಸಲಾಗಿದೆ.

**ಅನುಸೂಚಿ**

| ಕ್ರ. ಸಂ | ಕೆಲಸದ ವರ್ಗಗಳು | ಕನಿಷ್ಠ ವೇತನ ಪ್ರತಿ ದಿನಕ್ಕೆ | ಕನಿಷ್ಠ ವೇತನ ಪ್ರತಿ ತಿಂಗಳಿಗೆ |
|---|---|---|---|
| | | ರೂಪಾಯಿಗಳಲ್ಲಿ | |
| 1 | ವಯಸ್ಕರು | 139-80 | - |
| 2 | ಅರೆ ವಯಸ್ಕರು | 121-64 | - |
| 3 | ಮೇಲ್ವಿಚಾರಕರು | - | 4,158-73 |

**ತುಟ್ಟಿಭತ್ಯೆ:**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳನ್ನು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960–100) 3944 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 3944 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 4 ಪೈಸೆಯಂತೆ ತುಟ್ಟಿಭತ್ಯೆ ನೀಡತಕ್ಕದ್ದು.

ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಾಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2010 ರಿಂದ ಡಿಸೆಂಬರ್ 2010)ರ ಸರಾಸರಿ ಆಧಾರದ ಮೇಲೆ 2011 ಏಪ್ರಿಲ್ 1ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ವೇತನದ ಮಾಸಿಕ ದರಗಳನ್ನು 26 ದಿನಗಳಿಂದ ವಿಭಾಗಿಸಿ, ನಾಲ್ಕು ರಜಾ ದಿನಗಳಿಗಾಗಿ ವೇತನವನ್ನು ನೀಡುವುದು ಸೇರಿದಂತೆ ಲೆಕ್ಕ ಹಾಕತಕ್ಕದ್ದು.

**ತುಟ್ಟಿಭತ್ಯೆಯನ್ನು ಲೆಕ್ಕಾಚಾರ ಮಾಡುವ ವಿಧಾನ:**

ಅ] ಮಾಸಿಕ ವೇತನವನ್ನು ಪಡೆಯುವವರು:–

ಪ್ರತಿ ವರ್ಷ ಹೆಚ್ಚಾಗುವ ಸಿ.ಪಿ.ಐ ಅಂಶಗಳು x ತುಟ್ಟಿಭತ್ಯೆಯ ದರ x 30 ದಿನಗಳು = ತುಟ್ಟಿಭತ್ಯೆ.

ಆ] ದಿನಗೂಲಿ ವೇತನ ಪಡೆಯುವವರು:–

ಪ್ರತಿ ವರ್ಷ ಹೆಚ್ಚಾಗುವ ಸಿ.ಪಿ.ಐ ಅಂಶಗಳು x ತುಟ್ಟಿಭತ್ಯೆಯ ದರ x 30 ದಿನಗಳು / 26 = ತುಟ್ಟಿಭತ್ಯೆ.

2. ಮಹಿಳೆಯರು ಮತ್ತು ಪುರುಷರು ಒಂದೇ ರೀತಿಯ ಕೆಲಸವನ್ನು ನಿರ್ವಹಿಸಿದ ಸಂದರ್ಭಗಳಲ್ಲಿ ಉಭಯತ್ರರಿಗೂ ಸಮಾನ ದರದ ವೇತನಗಳನ್ನು ಸಂದಾಯ ಮಾಡತಕ್ಕದ್ದು.

3. ಪ್ರಸ್ತುತ ಪಾವತಿಸುತ್ತಿರುವ ವೇತನ ದರವು ಹೆಚ್ಚಾಗಿದ್ದಲ್ಲಿ ಆ ಹೆಚ್ಚಾಗಿರುವ ದರಗಳ ವೇತನವನ್ನು ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು.

4. ಅಧಿಸೂಚನೆಯಲ್ಲಿ ವರ್ಗವನ್ನು ನಮೂದಿಸದೆ ಇರುವ ವರ್ಗಗಳ ಕಾರ್ಮಿಕರಿಗೆ ಅದೇ ಸ್ವರೂಪದ ಕೆಲಸ ನಿರ್ವಹಿಸುತ್ತಿರುವ ಇತರೆ ವರ್ಗದ ಕಾರ್ಮಿಕರಿಗೆ ಪಾವತಿ ಮಾಡುತ್ತಿರುವ ವೇತನವನ್ನು ಸಂದಾಯ ಮಾಡತಕ್ಕದ್ದು.

5. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಳಿಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ಅಂತಹ ಕಡಿಮೆ ಅವಧಿಗೆ ಅನುಗುಣವಾಗಿ ವೇತನವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.

6. ದಿನಗೂಲಿ ನೌಕರರಿಗೆ ಅವರ ದಿನದ ವೇತನ ದರಗಳನ್ನು ಕಂಡು ಹಿಡಿಯಬೇಕಾದಲ್ಲಿ ತಿಂಗಳ ವೇತನ ದರವನ್ನು 26 ರಿಂದ ಭಾಗಿಸಬೇಕು. ಭಾಗಿಸಿದಾಗ ಬಂದ ದರವು ಭಿನ್ನಾಂಕವಾಗಿದ್ದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸಬೇಕು.

7. ಸಂಸ್ಥೆಯಲ್ಲಿ ನಿಗದಿಪಡಿಸಿರುವ ವಾರದ ರಜೆ ಅಥವಾ ಹಬ್ಬದ ರಜಾ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನ ಕಾಯ್ದೆ ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡುಪಟ್ಟು ವೇತನವನ್ನು ಪಾವತಿ ಮಾಡತಕ್ಕದ್ದು.

8. ಕೆಲಸಗಾರರು ದಿನದ ನಿಗಧಿತ ಅವಧಿಗಿಂತ ಹೆಚ್ಚು ಸಮಯ ಕೆಲಸ ನಿರ್ವಹಿಸಿದಲ್ಲಿ ಅಂತಹ ಹೆಚ್ಚುವರಿ ಅವಧಿ ಕೆಲಸಕ್ಕೆ ಆತನ ವೇತನದ ಎರಡುಪಟ್ಟು ವೇತನವನ್ನು ಪಾವತಿಸತಕ್ಕದ್ದು.

9. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.

10. ಟ್ರೈನಿಗಳಿಗೆ ಆ ವರ್ಗದ ನೌಕರರು ಪಡೆಯುತ್ತಿರುವ ವೇತನದ ಪ್ರತಿಶತ 75 ರಷ್ಟು ವೇತನವನ್ನು ಶಿಷ್ಯ ವೇತನವನ್ನಾಗಿ ಪಾವತಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

# ವಿಶೇಷ ಪತ್ರಿಕೆ



| ಭಾಗ – IV-A | ಬೆಂಗಳೂರು, ಬುಧವಾರ, ಸೆಪ್ಟೆಂಬರ್ ೧೪, ೨೦೧೧ (ಭಾದ್ರಪದ ೨೩, ಶಕ ವರ್ಷ ೧೯೩೩ | ನಂ. ೮೨೪ |
|---|---|---|



## ಸಾರಿಗೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಾರಿಇ 18 ಸಾಇನಿ 2011, ಬೆಂಗಳೂರು, ದಿನಾಂಕ: 14–09–2011**

ಕರ್ನಾಟಕ ಮೋಟಾರು ವಾಹನ ತೆರಿಗೆ ಅಧಿನಿಯಮ, 1957 (ಕರ್ನಾಟಕ ಕಾಯ್ದೆ 35/1957) ಕಲಂ 16(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸಾರ್ವಜನಿಕ ಹಿತದೃಷ್ಟಿಯಿಂದ ಮೇಲ್ಕಂಡ ಕಾಯ್ದೆಯಡಿ ಕರ್ನಾಟಕ ಹೊರತುಪಡಿಸಿ ಇತರೆ ರಾಜ್ಯಗಳಲ್ಲಿ ನೋಂದಾಯಿಸಲ್ಪಟ್ಟ

ಮತ್ತು ಆ ರಾಜ್ಯಗಳಲ್ಲಿ ತೆರಿಗೆ ಪಾವತಿಸಿರುವ ವಾಹನಗಳಿಗೆ ತೆರಿಗೆ ಪಾವತಿಯಿಂದ ವಿನಾಯಿತಿ ನೀಡಲು ಸರ್ಕಾರವು ತೀರ್ಮಾನಿಸಿದ್ದು, ಇತರೆ ರಾಜ್ಯದ ವಾಹನಗಳು ಮೋಟಾರು ವಾಹನ ಕಾಯ್ದೆ 1988ರ ಸೆಕ್ಷನ್ 88ರ ಸಬ್ ಸೆಕ್ಷನ್ (8)ರ (ಕೇಂದ್ರ ಕಾಯ್ದೆ 59/88) ಅನುಸಾರ ವಿಶೇಷ ರಹದಾರಿ ಪಡೆದು ದಿನಾಂಕ: 28.9.2011 ರಿಂದ 07.10.2011 ರವರೆಗೆ (ಉಭಯ ದಿನಗಳು ಸೇರಿ) ಕರ್ನಾಟಕದ ಮೈಸೂರು ನಗರಕ್ಕೆ ಮಾತ್ರ ಆಗಮಿಸಲಿರುವ ಪ್ರವಾಸಿ ವಾಹನಗಳಿಗೆ ಮಾತ್ರ ತೆರಿಗೆ ಪಾವತಿಯಿಂದ ವಿನಾಯಿತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಾಮಚಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಾರಿಗೆ ಇಲಾಖೆ

## TRANSPORT SECRETARIAT

### NOTIFICATION

**No. TRD 18 SAENI 2011, Bangalore, dated: 14.09.2011**

In exercise of powers conferred by sub-section (1) of section 16 of the Karnataka Motor Vehicles Taxation Act, 1957 (Karnataka Act 35 of 1957), the Government of Karnataka being of the opinion that it is necessary in the public interest so to do hereby exempt the tax payable under the said Act in respect of the vehicles registered in the States other than the State of Karnataka covered by special permits issued under sub-section (8) of section 88 of Motor Vehicles Act, 1988 (Central Act 59 of 1988) which are valid in the state of Karnataka, for a period from 28.09.2011 to 07.10.2011 (both days inclusive) provided such vehicles have already paid the tax to the State in which the vehicles have been registered and the special permits shall cover visit to Mysore city only in Karnataka.

By Order and in the name of the Governor of Karnataka

**Ramachandra**
Under Secretary to Government,
Transport Department

# ವಿಶೇಷ ಪತ್ರಿಕೆ


| ಭಾಗ – I | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೧೫, ೨೦೧೧ (ಭಾದ್ರಪದ ೨೪, ಶಕ ವರ್ಷ ೧೯೩೩) | ನಂ. ೮೨೬ |
|---|---|---|


## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಸುತ್ತೋಲೆ

**ಸಂಖ್ಯೆ: ಸಿಆಸುಇ 26 ಸೇಇವಿ 2011, ಬೆಂಗಳೂರು, ದಿನಾಂಕ: 26.7.2011**

**ವಿಷಯ:** ಇಲಾಖಾ ವಿಚಾರಣೆಯನ್ನು ನಡೆಸಲು ನಿವೃತ್ತ ಅಧಿಕಾರಿಗಳನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸುವ ಕುರಿತು.

**ಉಲ್ಲೇಖ:** ದಿನಾಂಕ 24.4.1998 ರ ಸರ್ಕಾರಿ ಆದೇಶದ ಸಂಖ್ಯೆ: ಸಿಆಸುಇ 3 ಸೇಇವಿ 96.

* * *

ಕರ್ನಾಟಕ ಸಿವಿಲ್ ಸೇವೆಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957 ರಡಿಯಲ್ಲಿ ಮಾಡುವ ಇಲಾಖಾ ವಿಚಾರಣೆಗಳನ್ನು ನಿವೃತ್ತ ನ್ಯಾಯಾಧೀಶರು ಹಾಗೂ ನಿವೃತ್ತ ಸರ್ಕಾರದ ಅಧಿಕಾರಿಗಳಿಗೆ ವಹಿಸುವ ಬಗ್ಗೆ ಉಲ್ಲೇಖಿತ ದಿನಾಂಕ 24.4.1998 ರ ಸರ್ಕಾರಿ ಆದೇಶದಲ್ಲಿ ಮಾರ್ಗಸೂಚನೆಗಳನ್ನು ನೀಡಲಾಗಿದೆ. ಸದರಿ ಆದೇಶದನ್ವಯ ಇಲಾಖಾ ವಿಚಾರಣೆಗಳನ್ನು ನಡೆಸಲು ನಿವೃತ್ತ ನ್ಯಾಯಾಧೀಶರ ವ್ಯಾಪಕ ಪಟ್ಟಿಯನ್ನು (Master Panel) ಕಾನೂನು ಇಲಾಖೆಯು ಆಗಿಂದಾಗ್ಗೆ ಪ್ರಕಟಿಸುತ್ತಿದೆ. ಈ ಆದೇಶದಂತೆ ಇಲಾಖಾ ವಿಚಾರಣೆಗಳನ್ನು ನಡೆಸುವ ಸಲುವಾಗಿ ಪ್ರಾವೀಣ್ಯತೆ ಹಾಗೂ ಪ್ರಾಮಾಣಿಕತೆಯುಳ್ಳ ನಿವೃತ್ತ ಅಧಿಕಾರಿಗಳನ್ನು ಗುರುತಿಸಿ ಅಂತಹವರ ಪಟ್ಟಿಯನ್ನು ಸಹ ಪ್ರಕಟಿಸಲು ನಿರ್ಧರಿಸಲಾಗಿದೆ.

2. ಮೇಲೆ ತಿಳಿಸಿರುವ ದಿನಾಂಕ 24.4.1998 ರ ಸರ್ಕಾರಿ ಆದೇಶದ ಕಂಡಿಕೆ 4 ರಲ್ಲಿರುವ ಸೂಚನೆಗಳಲ್ಲಿನ ಕ್ರಮ ಸಂಖ್ಯೆ: (ಇ) ಮತ್ತು (ಈ) ಈ ಕೆಳಕಂಡಂತೆ ಮನರುಚ್ಚರಿಸಿದೆ:–

"(ಇ) ನಿವೃತ್ತ ಅಧಿಕಾರಿಗಳಿಗೆ ಸಂಬಂಧಿಸಿದಂತೆ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು) ಪಟ್ಟಿಯನ್ನು ತಯಾರಿಸತಕ್ಕದ್ದು. ಈ ಉದ್ದೇಶಕ್ಕಾಗಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು) ವಿವಿಧ ಆಡಳಿತ ಇಲಾಖೆಗಳಿಂದ ನಿವೃತ್ತ ಅಧಿಕಾರಿಗಳ ಹೆಸರುಗಳನ್ನು ಪಡೆಯತಕ್ಕದ್ದು. ಹೆಸರುಗಳನ್ನು ಸೂಚಿಸುವಾಗ, ಆಡಳಿತ ಇಲಾಖೆಗಳು ಅಂತಹ ನಿವೃತ್ತ ಅಧಿಕಾರಿಗಳು ಇಲಾಖಾ ವಿಚಾರಣೆ ನಡೆಸುವುದರಲ್ಲಿ ಹೊಂದಿದ ಅನುಭವ:ಪ್ರಾವೀಣ್ಯತೆ ಹಾಗೂ ಅವರ ಪ್ರಾಮಾಣಿಕತೆಯನ್ನು ದೃಢೀಕರಿಸಿಕೊಳ್ಳತಕ್ಕದ್ದು. ಈ ರೀತಿ ಹೆಸರುಗಳು ಸ್ವೀಕರಿಸಿದ ನಂತರ, ಪರಿಶೀಲಿಸಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು) ಒಂದು ವ್ಯಾಪಕ ಪಟ್ಟಿ (Master Panel) ಯನ್ನು ತಯಾರಿಸತಕ್ಕದ್ದು, ಈ ವ್ಯಾಪಕ ಪಟ್ಟಿಯಲ್ಲಿ ಕಾಲಕಾಲಕ್ಕೆ ಹೊಸ ಹೆಸರುಗಳನ್ನು ಸೇರಿಸಬಹುದು, ಯಾವುದೇ ಇಲಾಖೆ, ನಿವೃತ್ತ ಅಧಿಕಾರಿಗಳ ಸೇವೆಯನ್ನು ವಿಚಾರಣಾಧಿಕಾರಿಯಾಗಿ, ಮಂಡನಾಧಿಕಾರಿಯಾಗಿ ಅಥವಾ ದೋಷಾರೋಪಣಾ ಪಟ್ಟಿಯನ್ನು ತಯಾರಿಸಲು, ಪಡೆಯಲು ಇಚ್ಛಿಸಿದಲ್ಲಿ ಈ ವ್ಯಾಪಕ ಪಟ್ಟಿಯಲ್ಲಿ ಸೇರಿರುವ ಯಾವುದೇ ನಿವೃತ್ತ ಅಧಿಕಾರಿಗಳ ಸೇವೆಯನ್ನು ಪಡೆಯಬಹುದು.

(ಈ) ನಿವೃತ್ತ ಅಧಿಕಾರಿಯವರ ಹೆಸರನ್ನು ಪಟ್ಟಿ (panel) ಯಲ್ಲಿ ಸೇರಿಸುವ ಮುಂಚೆ ಅವರ ಲಿಖಿತ ಒಪ್ಪಿಗೆಯನ್ನು ಪಡೆಯತಕ್ಕದ್ದು."

ಮೇಲ್ಕಂಡ ಸೂಚನೆಗಳಂತೆ ಎಲ್ಲಾ ಇಲಾಖಾ ಮುಖ್ಯಸ್ಥರೂ ತಮ್ಮ ಇಲಾಖೆಯ ಆಡಳಿತ ವ್ಯಾಪ್ತಿಯಲ್ಲಿರುವ ಕ್ಷೇತ್ರ ಇಲಾಖೆಗಳಲ್ಲಿ ಸೇವೆ ಸಲ್ಲಿಸಿ ನಿವೃತ್ತಿಯಾಗಿರುವ ಹಾಗೂ ವಿಚಾರಣಾಧಿಕಾರಿಗಳಾಗಿ ಕಾರ್ಯನಿರ್ವಹಿಸಿ ಅನುಭವ ಹೊಂದಿರುವ ಹಾಗೂ ಈಗ ವಿಚಾರಣಾಧಿಕಾರಿಗಳಾಗಿ ಕೆಲಸ ನಿರ್ವಹಿಸಲು ಇಚ್ಛೆಯಿರುವವರ ಹೆಸರು, ಮನೆ ವಿಳಾಸ, ದೂರವಾಣಿ ಸಂಖ್ಯೆ (ಸ್ಥಿರ ಹಾಗೂ ಮೊಬೈಲ್ ದೂರವಾಣಿ ಸಂಖ್ಯೆ) ಮತ್ತಿತರ ವಿವರಗಳೊಂದಿಗೆ ಅವರುಗಳ ಪ್ರಾಮಾಣಿಕತೆಯನ್ನು ದೃಢೀಕರಿಸಿ ಸಂಬಂಧಪಟ್ಟ ಸರ್ಕಾರದ ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿಯವರಿಗೆ ಕಳುಹಿಸಿಕೊಡುವುದು. ಆಯಾ ಇಲಾಖೆಯ ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿಯವರು ಇಲಾಖಾ ಮುಖ್ಯಸ್ಥರುಗಳು ಕಳುಹಿಸಿದ ವಿವರಗಳನ್ನು ದೃಢೀಕರಿಸಿ ಪ್ರಧಾನ ಕಾರ್ಯದರ್ಶಿ, ಸಿ.ಆ.ಸು.ಇಲಾಖೆ ಇವರಿಗೆ ಕಳುಹಿಸಿಕೊಡಬೇಕೆಂದು ಕೋರಿದೆ.

ವಿಚಾರಣಾಧಿಕಾರಿಗಳಾಗಿ ಕೆಲಸ ನಿರ್ವಹಿಸುವ ನಿವೃತ್ತ ಅಧಿಕಾರಿಗಳಿಗೆ ಈಗ ನಿವೃತ್ತ ನ್ಯಾಯಾಧೀಶರುಗಳು ವಿಚಾರಣಾಧಿಕಾರಿಗಳಾಗಿ ಕೆಲಸ ನಿರ್ವಹಿಸಿದಾಗ ಪಡೆಯುತ್ತಿರುವಂತೆಯೇ ಈ ಕೆಳಕಂಡಂತೆ ಸಂಭಾವನೆಗಳನ್ನು ಪಾವತಿಸಲಾಗುವುದು:–

**(i)** ದೋಷಾರೋಪಣಾ ಪಟ್ಟಿಯನ್ನು ತಯಾರಿಸಲು ಪ್ರತಿ ಪ್ರಕರಣಕ್ಕೆ ರೂ.3000/– (ಮೂರು ಸಾವಿರ ರೂಪಾಯಿಗಳು) ಸಂಭಾವನೆ.

**(ii)** ಪ್ರತಿ ವಿಚಾರಣೆಗೆ ರೂ. 15,000/– (ಹದಿನೈದು ಸಾವಿರ ರೂಪಾಯಿಗಳು) ಸಂಭಾವನೆ (ವಾಹನ ಭತ್ಯೆಯೂ ಸೇರಿರುತ್ತದೆ).

**ಪಿ.ಮಾರ್ಕಂಡೇಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು–2)

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಶುಕ್ರವಾರ, ಸೆಪ್ಟೆಂಬರ್ ೧೬, ೨೦೧೧ (ಭಾದ್ರಪದ ೨೫, ಶಕ ವರ್ಷ ೧೯೩೩) | ನಂ. ೮೨೭ |
|---|---|---|

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಗ್ರಾಅಪ: 213 :ಉಖಾಯೋ 2009, ಬೆಂಗಳೂರು, ದಿನಾಂಕ: 15–09–2011**

**ಮಹಾತ್ಮಾಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಒಂಬುಡ್ಸ್‌ಮನ್‌ಗಳ ನೇಮಕಾತಿ–2011**

ಮಹಾತ್ಮಾಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಅಧಿನಿಯಮ 2005ರ ಪ್ರಕರಣ 27 ರ ಉಪ ಪ್ರಕರಣ 1 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಭಾರತ ಸರ್ಕಾರವು ಮಹಾತ್ಮಾಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಸ್ವೀಕರಿಸಲಾಗುವ ದೂರುಗಳನ್ನು ಪರಿಹರಿಸಿ ವಿಲೇಗೊಳಿಸಲು ಜಿಲ್ಲೆಗಳಿಗೆ ಒಂಬುಡ್ಸ್‌ಮನ್‌ಗಳನ್ನು ನೇಮಿಸಲು ದಿನಾಂಕ 07–09–2009 ರಂದು ಸೂಚನೆಗಳನ್ನು ಹೊರಡಿಸಿರುತ್ತದೆ. ಭಾರತ ಸರ್ಕಾರವು ಕರ್ನಾಟಕ ರಾಜ್ಯದಲ್ಲಿ ಒಂಬುಡ್ಸ್‌ಮನ್‌ಗಳ ನೇಮಕಾತಿಗಾಗಿ ಸರ್ಕಾರದ ಮುಖ್ಯ ಕಾರ್ಯದರ್ಶಿರವರ

ಅಧ್ಯಕ್ಷತೆಯಲ್ಲಿ ಒಂದು ಆಯ್ಕೆ ಸಮಿತಿಯನ್ನು ರಚಿಸಿರುತ್ತದೆ. ಒಂಬುಡ್ಸ್‌ಮನ್‌ಗಳ ನೇಮಕಾತಿಗಾಗಿ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿ ಪ್ರಮುಖ ದಿನ ಪತ್ರಿಕೆಗಳಲ್ಲಿ ಪ್ರಕಟಿಸಲಾಗಿದ್ದು, ಸ್ವೀಕರಿಸಲಾದ ಅರ್ಹ ಅರ್ಜಿಗಳನ್ನು ಸಮಿತಿಯ ಮುಂದೆ ದಿನಾಂಕ 26-07-2011 ರಂದು ಮಂಡಿಸಲಾಯಿತು. ಸಮಿತಿಯು ಈ ಕೆಳಕಂಡ ಅಭ್ಯರ್ಥಿಗಳನ್ನು ಆಯ್ಕೆ ಮಾಡಿ, ಆಯ್ಕೆ ಮಾಡಿರುವ ಅಭ್ಯರ್ಥಿಗಳ ಸಂಬಂಧ ಯಾವುದಾದರೂ ಆಕ್ಷೇಪಣೆಗಳಿದ್ದಲ್ಲಿ ಅಂತಹ ಆಕ್ಷೇಪಣೆಗಳನ್ನು ಆಹ್ವಾನಿಸಿ ಆಯ್ಕೆ ಪಟ್ಟಿಯನ್ನು ಅಂತಿಮವಾಗಿ ಪ್ರಕಟಿಸಲು ತೀರ್ಮಾನಿಸಿರುತ್ತದೆ.

| ಕ್ರಮ ಸಂ. | ಹೆಸರು ಶ್ರೀ/ಶ್ರೀಮತಿ | ವಿವರ | ನಿಗದಿಪಡಿಸಿರುವ ಜಿಲ್ಲೆಯ ಹೆಸರು |
|---|---|---|---|
| 1 | ಹೊಸೂರು ಕೆ ಜಿ | ನಿವೃತ್ತ ಸಿವಿಲ್ ನ್ಯಾಯಾಧೀಶರು ಸಿತಾರ್ ಅಪಾರ್ಟ್‌ಮೆಂಟ್ ಡಾಲರ್ಸ್ ಸ್ಕೀಮ್ #403. 33ನೇ ಮೈನ್ ರೋಡ್ 1ನೇ 'ಎ' ಕ್ರಾಸ್, ಬಿಟಿಮ್ 1ನೇ ಹಂತ ಬೆಂಗಳೂರು | ಬೆಂಗಳೂರು ನಗರ |
| 2 | ಎಚ್ ಎಸ್ ಕಡಗಟ್ಟಿ | ನಿವೃತ್ತ ಅಧಿಕಾರಿ ಪಿಜಿಬಿ ನಿವೃತ್ತ ಪಿಜಿಬಿ ಮ್ಯಾನೇಜರ್ ರಾಮಕೃಷ್ಣ ಕಾಂಪ್ಲೆಕ್ಸ್ ಶಿರಗುಪ್ಪ ರೋಡ್ ಬಳ್ಳಾರಿ | ಬಳ್ಳಾರಿ |
| 3 | ಶ್ರೀರಂಗ ಜಿ ಎಚ್ | ನಿವೃತ್ತ ಜಂಟಿ ನಿರ್ದೇಶಕರು #2524 5ನೇ ಮೈನ್ ರೋಡ್ ಡಿ ಬ್ಲಾಕ್ ದತ್ತಗಲ್ಲ 3ನೇ ಮೈನ್ ಕನಕದಾಸನಗರ ಮೈಸೂರು | ಮೈಸೂರು |
| 4 | ಪುಟ್ಟರಾಜು ಎನ್ | ನಿವೃತ್ತ ಜಂಟಿ ನಿರ್ದೇಶಕರು ತಾಂತ್ರಿಕ ಶಿಕ್ಷಣ ಇಲಾಖೆ #26/16 ಶ್ರೀಲಕ್ಷ್ಮೀನಿಲಯ ನ್ಯಾಯಾಲಯ ರೋಡ್ ಡಿಸ್ಟ್ರಿಕ್ಟ್ ಸೆಲ್ ಎದುರು ಚಾಮರಾಜನಗರ | ಚಾಮರಾಜನಗರ |
| 5 | ಡಾ ಚಂದ್ರಶೇಖರ್ ವಿ ಎಂ | ನಿವೃತ್ತ ಪ್ರೊಫೆಸರ್ ಮತ್ತು ಜಿಯೋಗ್ರಫಿ ಇಲಾಖೆಯ ಮುಖ್ಯಸ್ಥರು # 723 'ಎ' ಬ್ಲಾಕ್ 2ನೇ ಕ್ರಾಸ್ 3ನೇ ಮೈನ್ ಕನಕದಾಸನಗರ ಮೈಸೂರು | ಮಂಡ್ಯ |
| 6 | ಗೋವಿಂದ ರೆಡ್ಡಿ | ನಿವೃತ್ತ ಜಂಟಿ ನಿರ್ದೇಶಕರು ಸಿ ಮತ್ತು ಐ ಇಲಾಖೆ ಶ್ರೀನಿವಾಸ ನಿಲಯ ಹಿಂಭಾಗ ಯುನಿಟಿ ಹೆಲ್ತ್ ಕಾಪ್ಲೆಕ್ಸ್ ಸಿ ಕೆ ಪುರ ಚಿತ್ರದುರ್ಗ | ಚಿತ್ರದುರ್ಗ |
| 7 | ನಾಗರಾಜು ಎಸ್ | ನಿವೃತ್ತ ಡಿಜಿಎಂ ಕೆನರ ಬ್ಯಾಂಕ್ # 90 3ನೇ 'ಎ' ಕ್ರಾಸ್ 10ನೇ ಮೈನ್ ಸನ್ಮಾರ್ಗ ಸಿದ್ದಾರ್ಥನಗರ ಮೈಸೂರು | ಕೊಡಗು |
| 8 | ವ್ಯಾಸ್ ದೇಶಪಾಂಡೆ | ನಿವೃತ್ತ ಕೆಎಎಸ್ ಅಧಿಕಾರಿ #72 1ನೇ ಹಂತ ಅಕ್ಷಯ ಕಾಲೊನಿ ಹುಬ್ಬಳ್ಳಿ | ಉತ್ತರಕನ್ನಡ |
| 9 | ಬಸ್ರೂರ್ ರಾಜೀವ್ ಶೆಟ್ಟಿ | ನಿವೃತ್ತ ಸಹಾಯಕ ವ್ಯವಸ್ಥಾಪಕರು ವಿಜಯಾ ಬ್ಯಾಂಕ್ ಮತ್ತು ಹಾಲಿ ಉಪಾಧ್ಯಕ್ಷರು ರೆಡ್ ಕ್ರಾಸ್ ಸೊಸೈಟಿ #37 ಪದ್ಮಜ 11.2.70ಇ, ಪ್ರಗತಿನಗರ ಉಡುಪಿ | ಉಡುಪಿ |
| 10 | ನಾಗಶೆಟ್ಟಿ ಅಣ್ಣಾರಾವ್ ಪಾಟೀಲ್ | ನಿವೃತ್ತ ಕಾರ್ಯನಿರ್ವಾಹಕ ಅಭಿಯಂತರರು #4/11/489 ಜ್ಯೋತಿ ಕಾಲೋನಿ ಬೀದರ್ | ಬೀದರ್ |

ಆದ್ದರಿಂದ ಆಯ್ಕೆ ಪಟ್ಟಿಯನ್ನು ಈ ಮೂಲಕ ಪ್ರಕಟಿಸುತ್ತಾ, ಸಾರ್ವಜನಿಕರ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ ಲಿಖಿತರೂಪದಲ್ಲಿ ಪ್ರಧಾನ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ, 3 ನೇ ಮಹಡಿ, ಬಹುಮಹಡಿಗಳ ಕಟ್ಟಡ, ಬೆಂಗಳೂರು-560001 ಫ್ಯಾಕ್ಸ್-22353927. ಇ-ಮೇಲ್:nregs-ka@nic.in ಇವರಿಗೆ ಪ್ರಕಟಣೆಯ ದಿನಾಂಕದಿಂದ 30 ದಿನಗಳೊಳಗಾಗಿ ಸಲ್ಲಿಸಬಹುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ.ಶಿವಶಂಕರ**
ನಿರ್ದೇಶಕರು,
ಮಹಾತ್ಮಾಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ
ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## RURAL DEVELOPMENT AND PANCHAYAT RAJ SECRETARIAT

### NOTIFICATION

### No. RDP 213 EGS 2009, BANGALORE, DATED: 15.09.2011

### APPOINTMENT OF OMBUDSMAN UNDER MAHATMA GANDHI NATIONAL RURAL EMPLOYMENT GUARANTEE SCHEME - 2011

In exercise of the powers conferred under Sub-section (1) of Section 27 of Mahatma Gandhi National Rural Employment Guarantee Act, 2005, the Government of India has issued instructions vide letter dated 7.9.2009 to appoint Ombudsman for each district to resolve and redress the complaints. The Central Government has constituted a State level Committee for selection and appointment of Ombudsman under the Chairmanship of the Chief Secretary Government of Karnataka. Applications were invited from the eligible candidates through leading news papers. All the applications received were placed before the Committee on 26.07.2011. The Selection Committee has selected the following candidates and decided to invite objections from the public to notify final list.

| Sl. No. | Name Shri / Smt | Details / Address | Allocated District |
|---|---|---|---|
| 1 | Hosur K G | Retired civil judge sithar apartment dollars scheme # 403 33rd main road 1st a cross BTM 1st stage Bangalore | Bangalore urban |
| 2 | H S Kadagatti | Retired Officer Pgb Ex Pgb Manager Ramakrishna Complex Shiraguppa Road Bellary | Bellary |
| 3 | Shreeranga G H | Retired Joint Director Agriculture Dept # 2524 5th Main Road D Block Dattagalla 3rd Main Kanakadasanagara Mysore | Mysore |
| 4 | Puttaraju N | Retired Joint Director Technical Education Department # 26/16 Shri laxminilaya Nyayalaya Road Opp Dist Cell Chamarajanagara | Chamrajnagar |
| 5 | Dr Chandrashekar V M | Retired Professor & Hod Of Goegraphy # 723 A Block 2nd Cross 3rd Main Kanakadasanagara Mysore | Mandya |
| 6 | Govinda Reddy | Retired Joint Director C & I Department Shrinivasa Nilaya Behind Unity Helth Complex C K Pura Chitradurga | Chitradurga |
| 7 | Nagaraju S | Retired Dgm Canara Bank #90 3rd A Cross 10th Main Sanmarga Siddarthanagara Mysore | Kodagu |
| 8 | Vyas Deshpande | Retired Kas Officer # 72 First Stage Akshaya Colony Hubballi | Uttara Kannada |
| 9 | Basrur Rajeev Shetty | Retired Asst Manager Vijaya Bank & Present Vice-Chairman Red Cross Society #37 Padmaja 11.2.70e, Pragati Nagara Udupi | Udupi |
| 10 | Nagasetty Anna Rao Patil | Retired Executive Engineer # 4/11/489 Jothi Calony Bidar | Bidar |

Objections if any, may be sent to the Principal Secretary to Government, Rural Development & Panchayat Raj Department, Government of Karnataka, 3rd Gate, 3rd floor, M.S. Buildings, Bangalore-560 001: Fax: 080-22353927, email: nregs-ka@nic.in within 30 days from the date of this publication.

By order and in the name of the Governor of Karnataka

**P.Shivashankar**
Director, MGNREGA &
E/o Joint Secretary to Govt,
Rural Development & Panchayat Raj Dept.

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಶುಕ್ರವಾರ, ಸೆಪ್ಟೆಂಬರ್ ೧೬, ೨೦೧೧ (ಭಾದ್ರಪದ ೨೫, ಶಕ ವರ್ಷ ೧೯೩೩) | ನಂ. ೮೨೮ |
|---|---|---|


## EDUCATION SECRETARIAT

## NOTIFICATION

### No. ED 60 TPU 2010, Bangalore, dated 16th September, 2011

The draft of the following rules which the Government of Karnataka proposes to make in exercise of the powers conferred by sub-section (1) of section 3 read with section 8 of the Karnataka State Civil Services Act, 1978 (Karnataka Act 14 of 1990) is hereby published as required by clause (a) of sub-section (2) of section 3 of the said Act, for the information of all the persons likely to be affected thereby and notice is hereby given that the said draft will be taken into consideration after fifteen days from the date of its publication in the official Gazette.

Any objection or suggestion which may be received by the State Government from any person with respect to the said draft before the expiry of period specified above will be considered by the State Government. The objections and suggestions may be addressed to the Secretary to Government, Education Department, Multi Storied Building, Bangalore 560 001.

### DRAFT RULES

**1. Title and commencement.-** (1) These rules may be called the Karnataka General Service (Pre-University Education Department) (Recruitment to the cadre of Lecturers of Government Pre-University Colleges) (Special) Rules, 2011.

(2) They shall come into force from the date of their publication in the official Gazette.

(3) Notwithstanding anything contained in the Karnataka Civil Services (General Recruitment) Rules, 1977 or in the Karnataka General Service (Pre-University Education Department) (Recruitment) Rules, 1996 or in any other rules of recruitment relating to the categories of posts specified in the schedule made or deemed to have been made under the Karnataka State Civil Services Act, 1978 (Karnataka Act 14 of 1990), the provisions of these rules, shall apply to the 1765 direct recruitment vacancies for the category of posts of Lecturers in the Government Pre-University Colleges as specified in the said schedule:

Provided that nothing in these rules shall apply to more than one recruitment.

**2. Definitions.-** (1) In these rules, unless the context otherwise requires,-

(a) “Appointing Authority” means the Director, Department of Pre-university Education;

(b) “CAC” means Centralised Admission Cell , functioning under the Department of Public Instruction;

(c) "Schedule" means the schedule appended to these rules;

(d) “Special Recruitment Committee” means Recruitment Committee constituted under rule 3.

(2) Other words and expressions used but not defined in these rules shall have the same meaning assigned to them in the Karnataka Civil Services (General Recruitment) Rules, 1977.

**3. Constitution of special recruitment committee.-** The State Government shall, by notification, constitute a special recruitment committee at the state level consisting of the following members namely:-

| | | | |
|---|---|---|---|
| (i) | The Director, Department of Pre-university Education | – | Chairman |
| (ii) | The Director, Social Welfare Department or his representative not below the cadre of Joint Director | - | Member |
| (iii) | The Director, Backward Classes and Minorities or his representative not below the cadre of Joint Director | - | Member |
| (iv) | The Joint Director (Administration), Department of Pre-university Education | – | Member |
| (v) | The Special Officer, Centralized Admission Cell, Department of Public Instruction | – | Member - Secretary |

**4. Qualification and age.-** No person shall be eligible for direct recruitment under these rules unless he has,-

(a) passed Master Degree at least in Second Class in a subject specified in corresponding entries in column (3) of the Schedule with a Bachelor Degree of Education (B.Ed.)or its equivalent;

and

(b) has attained the age of eighteen years but has not attained the age of,-

(i) forty five years in case of the Scheduled Castes, the Scheduled Tribes and Category – I of other Backward Classes;

(ii) forty three years in case of Category II(a), Category II(b), Category III(a), Category III(b) of other Backward Classes; and

(iii) forty years in case of others.

**5. Application for recruitment.-** The special recruitment committee shall take necessary steps to invite applications from eligible candidates by advertising in the Karnataka Gazette, specifying the conditions of eligibility, method of recruitment, provisional number of vacancies subject wise to be filled and their classification. An abstract of such advertisement shall be published at least in two leading newspapers having wide circulation in the state of which one shall be in Kannada.

**6. Competitive examination for selection.-** (1) The special recruitment committee shall make necessary arrangements to conduct a competitive examination through Centralised Admission Cell in the form of an objective multiple choice examinations.

(2) The special recruitment committee shall constitute an expert committee which shall consist of,-

(a) Director of Pre-University Education - Chairman

(b) Joint Director (Administration and Examination), Pre-University Education - Member

(c) Experts in the concerned subject - Members

(3) The expert committee shall prepare question papers and evaluate the papers.

(4) he paper shall be set by the expert committee in Kannada and English medium. A candidate may answer the papers either wholly in Kannada or wholly in English but not in both.

(5) The Kannada Language paper shall carry 150 marks and shall be of 3 hours duration. The paper shall be of the standard equivalent to that of first language Kannada at S.S.L.C level. The questions shall be of multiple choice type. The candidate shall secure a minimum of 50 marks in order to get eligibility for selection. However the marks secured in the Language paper shall not be considered for the preparation of the merit list.

(6) The specific papers shall consist of the paper 1 and 2 which shall be in the concerned subject in which the candidate has passed the qualifying post graduate examination. Each paper shall carry 150 marks and shall be of 3 hours duration. The expert committee shall prepare question paper in both Kannada and English versions. The candidate may answer the paper either in Kannada or in English. The visually impaired (Blind) candidates certified by the expert

committee shall be provided the scribe facility by the expert committee as per rules. The valuation of Multiple Choice questions shall be done on the basis of negative marks valuation in case of wrong answers. Quarter mark shall be deducted for each wrong answer. The syllabus for these papers shall be the same as prescribed for main examination specified in the Karnataka Recruitment of Gazetted Probationer's (Appointment by Competitive Examination) Rules, 1997. The marks secured in specific papers shall be reckoned for the preparation of the merit list.

**7. List of selected candidates.-** (1) The special recruitment committee shall from among the candidates who have applied in pursuance to the advertisements under rule 5 and on the basis of marks obtained in the specific papers of the competitive examination and subject to the conditions specified in rule 6 and subject to the orders in force from time to time relating to reservation in appointments or posts, prepare the merit list of candidates equal to the number of vacancies notified.

(2) If two or more candidates have secured equal percentage of marks in the qualifying examination, the order of merit in respect of such candidates shall be fixed on the basis of their age, the elder in age being placed above the younger in the order of merit. The special recruitment committee shall prepare a final selection list of candidates in respect of each category of post accordingly.

(3) The special recruitment committee shall also prepare an additional list of such of the candidates not included in the main list prepared under sub-rule (1). The number of candidates to be included in the additional list shall be as far as possible 10% of the number of candidates in each of the reservation categories (horizontal and vertical) in the list under sub-rule (1). There shall atleast be one candidate in the additional list belonging to each of the reservation categories (horizontal and vertical) represented in the list under sub-rule (1). If a candidate whose name is included in the list under sub-rule (1) fails to report for duty within the prescribed period, then a candidate belonging to the same reservation category as of the candidate who failed to report for duty shall be appointed from the additional list.

(4) The select list prepared under sub-rule (1), shall be published in the official Gazette and shall be valid till all the vacancies specified under these rules are filled up or until the expiry of the period of six months from the date of publication of the list prepared under sub-rule (3) whichever is earlier.

**8. Appointment of candidates.-** (1) The special recruitment committee shall send the list of the candidates selected under rule 7 to the Appointing Authority. The candidates whose names are included in the main list sent by the special recruitment committee shall be appointed by the Appointing Authority in the vacancies in the order in which the names are found in the main list after satisfying itself, after such enquiry as may be considered necessary that each candidate is suitable in all respects for such appointment.

(2) The inclusion of the name of the candidates in the list published under rule 7, shall not confer any right of appointment. The candidates in the additional list may be appointed in the post, not exceeding the extent of unfilled vacancies in the main list.

**9. Application of other rules.-** The Karnataka Civil Services (Classification, Control and Appeal) Rules, 1957, the Karnataka Civil Services (Conduct) Rules, 1966, the Karnataka Civil Services (Probation) Rules, 1977 and all other rules for the time being in force regulating the recruitment and conditions of services of Government servants made or deemed to have made under the Karnataka State Civil Services Act, 1978 (Karnataka Act 14 of 1990) in so far as such rules are not inconsistent with the provisions of these rules shall be applicable to the selection made and to the persons appointed under these rules.

**SCHEDULE**

**(see rule 4)**

| **Sl. No.** | **Category of posts and scale of pay** | | **Minimum qualification** |
|---|---|---|---|
| **(1)** | **(2)** | | **(3)** |
| | | | **Second Class Master's Degree in** :- |
| 1. | Lecturer in Kannada | - | Kannada or Kannada language Literature or Kannada and Janapada or janapada Sahitya. Kannada Sahitya and Shasana Shastra, Kannada Sahitya and Bhasha Shastra, Kannada Sahitya Bhashanthara and Taulanika Adyayana |
| 2. | Lecturer in English | - | English |
| 3. | Lecturer in Urdu | - | Urdu and Persian |
| 4. | Lecturer in Sanskrit | - | Sanskrit+Vidwat +Degree |
| 5. | Lecturer in History | - | History or Ancient History Archeology, Ancient India History and Epigraphy |
| 6. | Lecturer in Economics | - | Economics |
| 7. | Lecturer in Sociology | - | Sociology or Social work |
| 8. | Lecturer in Geography | - | Geography or Applied Geography |
| 9. | Lecturer in Physics | - | Physics |
| 10. | Lecturer in Mathematics | - | Mathematics or applied Mathematics |
| 11. | Lecturer in Biology | - | Botony or Zoology or Life Science or Bio Science or Applied Botany or Applied Zoology |
| 12. | Lecturer in Commerce | - | Commerce |
| 13. | Lecturer in Geology | - | Geology or applied Geology or Geo Information |
| 14. | Lecturer in Hindi | - | Hindi or Ratna or Praveen |
| 15. | Lecturer in Logic | - | Philosophy |
| 16. | Lecturer in Marathi | - | Marathi |
| 17. | Lecturer in Tamil | - | Tamil |
| 18. | Lecturer in Telugu | - | Telugu |
| 19. | Lecturer in French | - | French |
| 20. | Lecturer in Electronics | - | Electronics Science or Physics with Electronic Specialization or M.Tech/ME Electronics and Communication, Electrical and Electronics |

| Sl. No. | Category of posts and scale of pay | | Minimum qualification |
|---|---|---|---|
| (1) | (2) | | (3) |
| 21. | Lecturer in Computer | - | BE-Computer Science, BE-Information Science, MCA, M.Sc.,(Comp-Sc) |
| 22. | Lecturer in Political Science | - | Political Science |
| 23. | Lecturer in Education | - | M.Ed or 2 years M.A (Edn) |
| 24. | Lecturer in Statistics | - | M.A/M.Sc in Statistics |
| 25. | Lecturer in Psychology | - | Psychology |
| 26. | Lecturer in Malayalam | - | Malayalam |
| 27. | Lecturer in Home Science | - | Home Science |
| 28. | Lecturer in Chemistry | - | Chemistry or Physical Chemistry or Organic Chemistry or Inorganic Chemistry or Analytical Chemistry or Industrial Chemistry or Bio Chemistry or Applied Chemistry or Pharmaceutical Chemistry or Medicinal Chemistry or the candidates that who have completed the five years Integrated M.Sc., course in Chemistry or Applied Chemistry |

By Order and in the name of the Governor of Karnataka,

**S.H.KURIYAVAR**
Under Secretary to Government
Education Department (P.U.)


# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಶನಿವಾರ, ಸೆಪ್ಟೆಂಬರ್ ೧೭, ೨೦೧೧ (ಭಾದ್ರಪದ ೨೬, ಶಕ ವರ್ಷ ೧೯೩೩) | ನಂ. ೮೩೦ |
|---|---|---|


## TRANSPORT SECRETARIAT

## NOTIFICATION

### No. Sa Ri E 196 Sa E Se 2011, Bangalore, Date: 17-9 -2011

In exercise of the powers conferred by rule 118 of the Central Motor Vehicles Rules, 1989 read with Section 21 of the Karnataka General Clauses Act, 1899, and the order of the Supreme Court of India in SLP (Civil) No. 17135/2008, dated 18-8-2011, the Government of Karnataka hereby rescind the Notification No. Sa Ri E 321 Sa E Pa 2007, dated 31-10-2008 published in the Karnataka Gazette Extra-ordinary dated : 31-10-2008 along with all earlier notifications, issued in this behalf and notify the following category of transport vehicles which shall be fitted with a Speed Governor (speed limiting device) confirming to the standard specified in rule 118, namely:-

a) Stage Carriages;

b) Contract Carriages with seating capacity exceeding 7+1;

c) Maxi Cabs;

